

ನಿನ್ನ ನಂಬಿದವರ ಕಾಯೋ ನಿಜವುಳ್ಳ ದೇವಾ
**ಎನ್ನನುದ್ಧರಿಸಿ ಕಾಯೋ ಕರುಣಿ ವೆಂಕಟಾ**

ಸುರಪತಿ ಮುನಿದು ಮಳೆಗರೆಯಲೇಳು ದಿನವು ಬಿಡದೆ
ಕರುಗಳೆಲ್ಲಾ ಸೊರಗಿ ಬಾಯಿ ಬಿಡುತಿರಲು
ಬೆರಳಿನಿಂದ ಗೋವರ್ಧನ ಗಿರಿಯನೆತ್ತಿ ಗೋಗಳನ್ನು
ಉದ್ಧರಿಸಿ ಕಾಯ್ದೋ ಕರುಣಾಸಿಂಧು, ಕಮಲಲೋಚನ

ಮಡುವಿನೊಳಗೆ ಮಲೆತ ನೀರ ಕುಡಿಯಬಂದ
ಗಜವ ನೆಗಳಿ
**ಬಿಡದೆ** ಕಾಲಕಚ್ಚಿ ಭಂಗ ಪಡಿಸುತಿರಲು
ತಡೆಯಲಾರದೆ ಪ್ರಾಣಬಿಡುವ ಸಮಯದಲ್ಲಿ ಬಂದು
ಕೆಡಹಿ ಚಕ್ರದಿಂದ ನೆಗಳಿ ಕರಿಯ ಸಲಹಿದೆ

ಮತ್ತೆ ಮಂದಜ್ಞಾನದಿಂದ ಮೈಯ ಮರೆತು
ಬರಲು ಸ್ತನವ
ತುತ್ತು ಮಾಡಿ ಪಿಡಿದು ಕುದುರಿ ಕ್ರೂರಪಂತದಿ
ಕತ್ತರಿಸುವೊ ಸಮಯದಲ್ಲೆ ಕಡಿಗೆ ಮಾಡಿ
**ಕಾಯೊ ಎನ್ನ**
ಕರ್ತ ಹೆಳವನಕಟ್ಟೆ ಕರುಣಿ ವೆಂಕಟ

— ಹೆಳವನಕಟ್ಟೆ ಗಿರಿಯಮ್ಮ.

ಸಂದರ್ಶಿಸಿ! ಅನುಗ್ರಹೀತರಾಗಿರಿ!!

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ಶ್ರೀನಿವಾಸ ಮಂಗಾಪುರ



## ವಾರ್ಷಿಕ ಬ್ರಹ್ಮೋತ್ಸವಗಳು 1984
### ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 20–2–84 | ಸೋಮ | — | ಅಂಕುರಾರ್ಪಣೆ |
| 21–2–84 | ಮಂಗಳ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 22–2–84 | ಬುಧ | ಚಿಕ್ಕ ಶೇಷವಾಹನ | ಹಂಸವಾಹನ |
| 23–2–84 | ಗುರು | ಸಿಂಹವಾಹನ | ಮುತ್ತಿನ ಪಲ್ಲಕ್ಕಿವಾಹನ |
| 24–2–84 | ಶುಕ್ರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 25–2–84 | ಶನಿ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | **ಗರುಡೋತ್ಸವ** |
| 26–2–84 | ಭಾನು | ಹನುಮದ್ವಾಹನ, ಸಂಜೆ ವಸಂತೋತ್ಸವ | ಗಜವಾಹನ |
| 27–2–84 | ಸೋಮ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 28–2–84 | ಮಂಗಳ | **ರಥೋತ್ಸವ** | ಅಶ್ವವಾಹನ |
| 29–2–84 | ಬುಧ | ಅವಭೃತೋತ್ಸವ | ಧ್ವಜಾವರೋಹಣ |

ಸೂಚನೆ: ಶ್ರೀನಿವಾಸ ಮಂಗಾಪುರ ತಿರುಪತಿ–ಮದನಪಲ್ಲಿಯ ರಸ್ತೆಯಲ್ಲಿ ಚಂದ್ರಗಿರಿಯ ಬಳಿಯಿದೆ. ತಿರುಪತಿಯಿಂದಲೂ ಚಂದ್ರಗಿರಿಯಿಂದಲೂ ಬಸ್ ಸೌಕರ್ಯ ಉಂಟು. ಬ್ರಹ್ಮೋತ್ಸವಗಳ ದಿನಗಳಲ್ಲಿ ದಿನವೂ ವಿಶೇಷ ಕಾರ್ಯಕ್ರಮಗಳಿರುತ್ತವೆ.

**ತಿರುಮಲೆ ತಿರುಪತಿ ದೇವಸ್ಥಾನಗಳು.**

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.



ಗೌರವ ಸಂಪಾದಕರು :
ಪ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

ಸಂಪುಟ ೧೪] ಜನವರಿ ೧೯೮೪ [ಸಂಚಿಕೆ ೮

# ವಿಷಯಸೂಚಿ

# ಸಂಪಾದಕೀಯ

ದೇವರು ಇರುವನೇ ಎಂಬ ಪ್ರಶ್ನೆ ಬಂದಿತು. ದ್ರಷ್ಟಾರರೆಲ್ಲರೂ ಇರುವನೆಂದೇ ಹೇಳಿದರು. ಹೇಗಿರುವನೆಂಬ ಪ್ರಶ್ನೆಗೆ ತಲೆಗೊಂದು ಬಗೆಯ ಉತ್ತರ ಬಂದಿತು. ಒಮ್ಮೆ ತನುಮಾತ್ರ ಪ್ರಾರ್ಥನೆ ಮಾಡಿ ಪರೀಕ್ಷೆಮಾಡಿ ನೋಡುವ ಎಂದುಕೊಂಡ ಗಜೇಂದ್ರನಿಗೆ 'ಇಹನು ಇಹನೆಂಬುವವನು ಇಹನೋ ಇಲ್ಲವೋ' ಎಂಬ ಅನುಮಾನ ಬಂದು, ಭಯವುಂಟಾಗಿ, 'ನೀನಲ್ಲದನ್ಯರನರಿಯೆ ಕಾಯ್ದು ಕಡೆಹೋರೈ' ಎಂದು ಶರಣಾಗತನಾದ ನಂತರ ಆ ವೈಕುಂಠವಾಸಿ ಆತುರಾತುರವಾಗಿ ಬಂದು ಭವಮಕರ ಬಾಧೆಯಿಂದ ಮುಕ್ತನಾಗಿಸಿದಂದು 'ಹೌದು ನಿಜವೇ' ಎಂದುಕೊಂಡರೂ ಅದು ಸರ್ವಸಾಮಾನ್ಯಗೋಚರವಿಷಯವಲ್ಲವಾಗಿ ಇಂದಿಗೂ ಹೌದು ಅಲ್ಲ ಎನ್ನುವ ವಾದ ವಿವಾದಗಳನ್ನು ನಡೆಸುತ್ತಲೇ ಇದ್ದೇವೆ.

ಗ್ರಹಗಳಿವೇ ? ಅವುಗಳೂ ಇವೆಯೆಂದೇ ಪೂರ್ವಿಕರು ಹೇಳಿದರು. ಅಷ್ಟೇ ಅಲ್ಲ ಯಾವ ಯಾವ ಗ್ರಹ ಭೂಮಿಯಿಂದ ಎಷ್ಟೆಷ್ಟು ದೂರದಲ್ಲಿ ಪರಿಭ್ರಮಿಸುತ್ತಿದೆ, ಅವುಗಳಿಂದ ಯಾವ ಯಾವ ಫಲಗಳುಂಟಾಗುತ್ತವೆ ಎಂಬುದನ್ನೂ ವಿವರಿಸಿರುವುದುಂಟು. ನಮ್ಮವರು ಹೇಳಿದ್ದು ಹಿತ್ತಲಗಿಡವಾಯಿತು. ದೂರದರ್ಶಕಗಳು ಸಿಕ್ಕಿದ್ದರಿಂದ ಅವುಗಳ ಇರುವಿಕೆಯನ್ನು ಒಪ್ಪಿದರೂ, ಅವುಗಳಿಂದ ನಾವು ಪ್ರಭಾವಿತರಾಗುವುದಿಲ್ಲವೆಂದು ತೀರ್ಮಾನಿಸಿದೆವು.

ಸೂರ್ಯ ಚಂದ್ರರ ಮಾತೇನು ? ಹಗಲು ರಾತ್ರಿ ಒಂದನ್ನು ಬಿಟ್ಟು ಒಂದನ್ನು ನೋಡುತ್ತಿದ್ದೇವೆಯಾಗಿ ಇವುಗಳನ್ನು ಇಲ್ಲವೆಂದರೆ ಮರುಳನೆಂಬ ಹಣೆಪಟ್ಟಿ ಹಚ್ಚುವರೆಂದು ಒಪ್ಪಿಕೊಂಡೆವು. ಇಲ್ಲೂ ಚಂದ್ರನನ್ನು ಕಡೆಗಣಿಸಿದೆವು. ರವಿಕಿರಣವನ್ನು ಪ್ರತಿಬಿಂಬಿಸುವುದರಿಂದ ತಂಪಾದ ಬೆಳಕು ಬರುವುದರಿಂದ ಸ್ವಯಂಪ್ರಕಾಶಕ ಶಕ್ತಿ ಅದಕ್ಕೆ ಇಲ್ಲವೆಂದು ಒಂದು ಮೆಟ್ಟಿಲು ಇಳಿಸಿದೆವು.

ಮಿಕ್ಕದ್ದು ಸೂರ್ಯ. ಇಲ್ಲಿಯೇ ಬಂದದ್ದು ತೊಂದರೆ. ನಮ್ಮವರು ಹೇಳಿದ್ದೆಲ್ಲ ನಿಜವೆಂದು ವಿಜ್ಞಾನ ಶಾಸ್ತ್ರ ನಿರೂಪಿಸುತ್ತಿದೆ. ಅವನ ಇರುವಿಕೆಯಾಗಲೀ, ಇಲ್ಲದಿರುವಿಕೆಯಾಗಲೀ ನಮ್ಮನ್ನು ಪ್ರತಿಕ್ಷಣವೂ ಪ್ರಭಾವಿತಗೊಳಿಸುತ್ತದೆ. ಹಾಗಾಗಿ ಎಲ್ಲ ಶಾಸ್ತ್ರಗಳೂ ಏಕಕಂಠದಿಂದ ಅಂಗೀಕರಿಸಿದ ಸತ್ಯ ಸೂರ್ಯ.

ಬಹುಶಃ ಮಹರ್ಷಿಗಳೂ ಈ ಸಮಸ್ಯಾಸಿಂಧುವನ್ನು ಮಥಿಸಿ ಮಥಿಸಿ ದೃಶ್ಯಮಾನ ವಿಶ್ವಕ್ಕೆ ಸೂರ್ಯನನ್ನು ಪ್ರತ್ಯಕ್ಷ ನಾರಾಯಣನೆಂದು ತೀರ್ಮಾನಿಸಿದರು. ಒಂದು ವಿಧದಲ್ಲಿ ನೋಡಿದರೆ ಇದು ನಿಜವೇ ಎನ್ನಿಸುತ್ತದೆ

ವೈಷ್ಣವ ಪುರಾಣಗಳೆಲ್ಲ ನಾರಾಯಣನನ್ನು ಚತುರ್ಭುಜನಾಗಿ ಸವಿತೃಮಂಡಲಮಧ್ಯವರ್ತಿಯಾಗಿ ಆರಾಧ್ಯದೈವವೆಂದು ವರ್ಣಿಸುತ್ತಿವೆ. ಪುರುಷಸೂಕ್ತ ಸೂರ್ಯನು ವಿರಾಟ್ಪುರುಷನ ನೇತ್ರವೆಂದು ತಿಳಿಸುತ್ತದೆ. ಇನ್ನು ಶಾಕ್ತದಲ್ಲಿ ನೋಡಿದರೆ ದೇವೀ ಉಪಾಸಕರಿಗೆ ಸೂರ್ಯಮಂಡಲದಲ್ಲಿನ ಚಕ್ರಾರೂಢಳಾದ ದೇವ್ಯುಪಾಸನೆ ವಿಹಿತವೆಂದೂ ಆ ಸೂರ್ಯಮಂಡಲ ಪ್ರಾಪ್ತಿಯೇ ಅವರ ಧ್ಯೇಯವೆಂದೂ ಲಲಿತಾಸಹಸ್ರನಾಮಭಾಷ್ಯ ಸೂಚಿಸುತ್ತದೆ. ನಮ್ಮ ಮಂತ್ರಶಾಸ್ತ್ರವು ಸ್ತ್ರೀ ಪುರುಷರೂಪ ದೇವತೆಗಳೆಲ್ಲರೂ ಚಂದ್ರಾರ್ಕಾನಲ ತ್ರಿನೇತ್ರರೆಂದೇ ರೂಪಿಸಿದೆ. ಮಂತ್ರಶಾಸ್ತ್ರ ಸೂರ್ಯನನ್ನೂ ತ್ರಿನೇತ್ರನಾಗಿಯೇ ವರ್ಣಿಸಿರುವುದೊಂದು ವಿಶೇಷ. ಎಂದರೆ ತಾನು ಒಬ್ಬರ ಅಂಗವಾಗಿಯೇ ಅಲ್ಲದೆ ತನ್ನಲ್ಲಿಯೇ ಮೂರು ಧರ್ಮಗಳನ್ನು ಆವಾಹಿಸಿಕೊಂಡಿರುವನೆಂಬ ಮಾತು. ಸೃಷ್ಟಿಗೆ ಮೂಲಾಧಾರವಾದ ಕಾರಕಶಕ್ತಿ ತನ್ನದಾದರೆ ತೇಜೋರೂಪ, ಅದರ ಪರಾವರ್ತನೆಯಿಂದ ಪೋಷಕ ಶಕ್ತಿ 'ಓಷಧೀನಾಂ ಪತಿ' ಎನ್ನುವ ಪೂರ್ಣಚಂದ್ರನ ಸೌಮ್ಯಕಾಂತಿರೂಪವೂ, ಸರ್ವಜಡಚೇತನನಾಶಕರವಾದ ದಾಹಕಶಕ್ತಿ ಅಗ್ನಿರೂಪವನ್ನೂ ತನ್ನಲ್ಲಿಯೇ ಹೊಂದಿ, ಕರಚಾಲನದಿಂದಲೇ ಪ್ರಪಂಚವನ್ನು ನಡೆಸುತ್ತ, ದೇವಾಸುರ ನಮಸ್ಕೃತನಾದ ಆ ಅಖಂಡ ತೇಜೋರೂಪವನ್ನು ಅಗ್ನಿಗರ್ಭ, ಬ್ರಹ್ಮ, ವಿಷ್ಣು, ಶಿವ, ಎಂದೆಲ್ಲ ಕರೆದರದೂ ಕೊನೆಗೆ ಸರ್ವದೇವತಾತ್ಮನೆಂದು ಭಾವಿಸಿದರೂ ಆಶ್ಚರ್ಯವಿಲ್ಲ; ಅತಿಶಯೋಕ್ತಿಯೂ ಅಲ್ಲ. ನಿಜವೆಂದರೆ ನಮ್ಮ ದೇವತೆಗಳಿಗೆಲ್ಲ ಇರುವ ಗುಣಗಳೆಲ್ಲ ಇಲ್ಲಿ ಮೂರ್ತೀಭವಿಸಿವೆ.

ಅವನ ಚಲನೆಯಿಂದಲೇ ನಮಗೆ ಋತುಗಳು, ಸಂವತ್ಸರಗಳು ಉಂಟಾಗುತ್ತಿವೆ. ಎಲ್ಲ ವಸ್ತುಗಳ ಸ್ಥಿರತೆ ಇದರ ಆಧಾರದಿಂದಲೇ ನಿರ್ಣಯವಾಗುತ್ತದೆ. ಮಳೆ, ಬೆಳೆ, ನೆರೆ, ಬರ ಎಲ್ಲವೂ ಆತನ ಕರಕೌಶಲ್ಯವೇ. ಒಂದೇ ಮಾತಿನಲ್ಲಿ ಹೇಳುವುದಾದರೆ ವಿಶ್ವರಂಗದಲ್ಲಿನ ಆಗಮನ, ನಿರ್ಗಮನ ಎಲ್ಲವೂ ಆತನ ದಯಾಧರ್ಮಕಿರಣಗಳಿಂದಲೇ.

ಲೌಕಿಕಕ್ಕೇ ಅಲ್ಲ, ಪಾರಲೌಕಿಕಕ್ಕೂ ಸೂರ್ಯನೇ ಪ್ರಧಾನ ದೈವ. ಪಿತೃದೇವತೆಗಳಲ್ಲಿ ಮೂರು ತಲೆಮಾರಿನವರಿಗೆ ವಸು, ರುದ್ರ, ಆದಿತ್ಯರೆಂಬ ಗೌರವ ಸಂಪ್ರದಾಯ. ಈ ಮೂರೂ ಸೂರ್ಯನೇ. ಶ್ರಾದ್ಧಾದಿ ಕರ್ಮಗಳಲ್ಲಿ ಸೂರ್ಯದರ್ಶನ ಮಾಡುವುದು ಸಹ ಆದಿತ್ಯ ಪ್ರಾಧಾನ್ಯವನ್ನೇ ವಿವರಿಸುತ್ತದೆ.

(38 ನೇ ಪುಟ ನೋಡಿ)

# ಶ್ರೀ ಮದ್ಭಗವದ್ಗೀತೆ

## ೮ ನೆಯ ಅಧ್ಯಾಯ

# ಓಂಕಾರದ ಧ್ಯಾನ

ಅರ್ಜನಉವಾಚ–

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ
ಕಿಂ ಕರ್ಮ ಪುರುಷೋತ್ತಮ ।
ಅಧಿಭೂತಂ ಚ ಕಿಂ ಪ್ರೋಕ್ತಂ
ಅಧಿದೈವಂ ಕಿಮುಚ್ಯತೇ ॥ 1

ಅರ್ಜುನ: ಕೃಷ್ಣ, ಆ ಬ್ರಹ್ಮವೆಂದರೇನು? ಅಧ್ಯಾತ್ಮ ವೆಂಬುದೇನು? ಕರ್ಮವೆಂಬುದೇನು? ಅಧಿಭೂತವೆಂಬುದು ಯಾವುದು? ಅಧಿದೈವ ವೆಂದು ಯಾವುದಕ್ಕೆ ಹೆಸರು?

ಅಧಿಯಜ್ಞಃ ಕಥಂ ಕೋಽತ್ರ
ದೇಹೇಽಸ್ಮಿನ್ ಮಧುಸೂದನ ।
ಪ್ರಯಾಣಕಾಲೇ ಚ ಕಥಂ
ಜ್ಞೇಯೋಽಸಿ ನಿಯತಾತ್ಮಭಿಃ ॥ 2

ಅಧಿಯಜ್ಞವೆಂದರೆ ಈ ದೇಹದಲ್ಲಿ ಯಾರು? ಮನಸ್ಸನ್ನು ಬಿಗಿಹಿಡಿದವರು ಸಾವಿನ ಸಮಯ ದಲ್ಲಿ ಕೂಡ ಹೇಗೆ ನಿನ್ನನ್ನು ತಿಳಿಯಲಾಗುವುದು?

ಶ್ರೀ ಭಗವಾನುವಾಚ–

ಅಕ್ಷರಂ ಬ್ರಹ್ಮ ಪರಮಂ
ಸ್ವಭಾವೋಽಧ್ಯಾತ್ಮಮುಚ್ಯತೇ ।
ಭೂತಭಾವೋದ್ಭವಕರೋ
ವಿಸರ್ಗಃ ಕರ್ಮಸಂಜ್ಞಿತಃ ॥ 3

ಶ್ರೀಕೃಷ್ಣ: ನಾಶರಹಿತವಾದ ಪರಬ್ರಹ್ಮವೇ ಇಲ್ಲಿ ಹೇಳಿದ ಬ್ರಹ್ಮ. ಪ್ರತಿದೇಹದಲ್ಲಿಯೂ ಆತ್ಮ ವಾಗಿರುವುದು ಅಧ್ಯಾತ್ಮವೆನಿಸುವುದು. ಜೀವ ಜಡಗಳ ಸೃಷ್ಟಿಗೆ ಕಾರಣವಾದ ಭಗವಂತನ ಕ್ರಿಯೆಯೇ ನಿಜವಾದ ಕರ್ಮವೆನಿಸುವುದು.

ಅಧಿಭೂತಂ ಕ್ಷರೋ ಭಾವಃ
ಪುರುಷಶ್ಚಾಧಿದೈವತಮ್ ।
ಅಧಿಯಜ್ಞೋಽಹಮೇವಾತ್ರ
ದೇಹೇ ದೇಹಭೃತಾಂ ವರ ॥ 4

ಅರ್ಜುನ, ನಾಶವಾಗುವ ವಸ್ತುಗಳೆಲ್ಲ ಅಧಿಭೂತ, ವಿರಾಟ್‌ಪುರುಷನಾದ ಹಿರಣ್ಯಗರ್ಭನು ಅಧಿದೈವತ. ಈ ದೇಹದಲ್ಲಿ ಅಧಿಯಜ್ಞನು ನಾನೇ.

ಅಂತಕಾಲೇ ಚ ಮಾಮೇವ
ಸ್ಮರನ್ ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ
ಯಾತಿ ನಾಸ್ತ್ಯತ್ರ ಸಂಶಯಃ ॥ 5

ಯಾವನು ಸಾಯುವಾಗಲೂ ಕೂಡ ನನ್ನನ್ನೇ ಧ್ಯಾನಿಸುತ್ತ ಶರೀರವನ್ನು ಬಿಟ್ಟು ಹೋಗು ತ್ತಾನೋ ಅವನು ನನ್ನನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ.

ಯಂ ಯಂ ವಾಽಪಿ ಸ್ಮರನ್ ಭಾವಂ
ತ್ಯಜತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ
ಸದಾ ತದ್ಭಾವಭಾವಿತಃ ॥ 6

ಅರ್ಜುನ, ಎಡೆಬಿಡದೆ ಚಿಂತಿಸಿದ ಸಂಸ್ಕಾರದ ಬಲದಿಂದ ಕೊನೆಯ ಕಾಲದಲ್ಲಿ ಯಾವ ಯಾವ ರೂಪವನ್ನು ಚಿಂತಿಸುತ್ತ ಶರೀರವನ್ನು ಬಿಡು ವನೋ ಆಯಾ ಗತಿಯನ್ನೇ ಪಡೆಯುತ್ತಾನೆ.

ತಸ್ಮಾತ್ಸರ್ವೇಷು ಕಾಲೇಷು
ಮಾಮನುಸ್ಮರ ಯುಧ್ಯ ಚ ।
ಮಯ್ಯರ್ಪಿತಮನೋಬುದ್ಧಿಃ
ಮಾಮೇವೈಷ್ಯಸ್ಯಸಂಶಯಮ್ ॥ 7

ಆದ್ದರಿಂದ ಎಲ್ಲ ಸಮಯಗಳಲ್ಲಿಯೂ ನನ್ನನ್ನು ಚಿಂತಿಸು, ಯುದ್ಧವನ್ನೂ ಮಾಡು; ಮನಸ್ಸನ್ನೂ ಬುದ್ಧಿಯನ್ನೂ ನನಗೆ ಒಪ್ಪಿಸಿದವನಾಗಿ ನನ್ನನ್ನೇ ಹೊಂದುವೆ. ಈ ಮಾತಿಗೆರಡಿಲ್ಲ.



ನವರಾತ್ರಿ ಬ್ರಹ್ಮೋತ್ಸವದಲ್ಲಿ ಪುಷ್ಪಾಲಂಕಾರ – ಗೀತೋಪದೇಶ.

ಅಭ್ಯಾಸಯೋಗಯುಕ್ತೇನ
ಚೇತಸಾನಾನ್ಯಗಾಮಿನಾ ।
ಪರಮಂ ಪುರುಷಂ ದಿವ್ಯಂ
ಯಾತಿ ಪಾರ್ಥಾನುಚಿಂತಯನ್ ॥ 8

ಅರ್ಜುನ, ಅಭ್ಯಾಸದ ಬಲದಿಂದ ಏಕಾಗ್ರವಾದ ಮನಸ್ಸಿನಿಂದ ಪರಮಪುರುಷನನ್ನು ಧ್ಯಾನಮಾಡಿದವನು ಆ ಭಗವಂತನನ್ನು ಹೊಂದುತ್ತಾನೆ.

ಕವಿಂ ಪುರಾಣಮನುಶಾಸಿತಾರಂ
ಅಣೋರಣೀಯಾಂ ಸಮನುಸ್ಮರೇದ್ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪಂ
ಆದಿತ್ಯವರ್ಣಂ ತಮಸಃ ಪರಸ್ತಾತ್ ॥ 9

ಎಲ್ಲವನ್ನೂ ಬಲ್ಲ, ಸನಾತನನಾದ, ಜಗತ್ತನ್ನೆಲ್ಲ ನಿಯಂತ್ರಿಸುವ, ಸೂಕ್ಷ್ಮಕ್ಕಿಂತಲು ಸೂಕ್ಷ್ಮವಾದ, ಎಲ್ಲದರ ಧಾರಕನಾದ, ಅಚಿಂತ್ಯ ರೂಪನಾದ, ಸೂರ್ಯನಂತೆ ಬೆಳಗುವ ಅಪ್ರಾಕೃತರೂಪನಾದ ಭಗವಂತನನ್ನು ಧ್ಯಾನಿಸಬೇಕು.

ಪ್ರಯಾಣಕಾಲೇ ಮನಸಾಽಚಲೇನ
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್
ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥

ಸಾಯುವ ಕ್ಷಣದಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ಭಕ್ತಿಯುಕ್ತನಾಗಿ ಯೋಗಬಲದಿಂದ ಪ್ರಾಣವಾಯುವನ್ನು ಎರಡು ಹುಬ್ಬುಗಳ ನಡುವೆ ನೆಲೆಗೊಳಿಸಿದವನು ಆ ದಿವ್ಯನಾದ ಪರಮ ಪುರುಷನನ್ನು ಪಡೆಯುತ್ತಾನೆ.

ಯದಕ್ಷರಂ ವೇದವಿದೋ ವದಂತಿ
ವಿಶಂತಿ ಯದ್ಯತಯೋ ವೀತರಾಗಾಃ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ॥ 11

ವೇದಗಳನ್ನರಿತವರು ಯಾವ ನಿತ್ಯಸ್ವರೂಪವನ್ನು ವರ್ಣಿಸುವರೋ, ಸಂಸಾರಶೋಕವನ್ನು ದಾಟಿದ ಯತಿಗಳು ಯಾವ ರೂಪವನ್ನು ಸೇರುವರೋ ಯಾವುದನ್ನು ಬಯಸುವರೋ ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸುವರೋ, ಅಂಥ ಭಗವದ್ರೂಪವನ್ನು ನಿನಗೆ ಸಂಕ್ಷೇಪವಾಗಿ ಹೇಳುತ್ತೇನೆ.

ಸರ್ವದ್ವಾರಾಣಿ ಸಂಯಮ್ಯ
ಮನೋ ಹೃದಿ ನಿರುಧ್ಯ ಚ ।
ಮೂರ್ಧ್ನ್ಯಾಧಾಯಾತ್ಮನಃ
ಪ್ರಾಣಮಾಸ್ಥಿತೋ ಯೋಗಧಾರಣಾಮ್

ಓಮಿತ್ಯೇಕಾಕ್ಷರಂ ಬ್ರಹ್ಮ
ವ್ಯಾಹರನ್ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ದೇಹಂ
ಸ ಯಾತಿ ಪರಮಾಂ ಗತಿಮ್ ॥ 13

ದೇಹದ ಎಲ್ಲ ಬಾಗಿಲುಗಳನ್ನು ನಿಗ್ರಹಿಸಿ ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸಿ ತನ್ನ ಪ್ರಾಣವಾಯುವನ್ನು ನಡುನೆತ್ತಿಗೇರಿಸಿ ಯೋಗಸ್ಥಿತನಾಗಿ ಬ್ರಹ್ಮದ ಹೆಸರಾದ (ಓಂ) ಎಂಬ ಒಂದಕ್ಷರವನ್ನು ಉಚ್ಚರಿಸುತ್ತ ನನ್ನನ್ನು ನೆನೆಯುತ್ತ ಯಾವನು ದೇಹವನ್ನು ಬಿಟ್ಟು ಹೊರಬೀಳುತ್ತಾನೋ ಅವನು ಉತ್ತಮ ಗತಿಯನ್ನು ಹೊಂದುತ್ತಾನೆ.

ಅನನ್ಯಚೇತಸಾಸ್ಸತತಂ
ಯೋ ಮಾಂ ಸ್ಮರತಿ ನಿತ್ಯಶಃ ।
ತಸ್ಯಾಹಂ ಸುಲಭಃ ಪಾರ್ಥ
ನಿತ್ಯಯುಕ್ತಸ್ಯ ಯೋಗಿನಃ ॥ 14

ಅರ್ಜುನ, ಯಾವನು ಬೇರೆ ಕಡೆಗೆ ಮನಸ್ಸನ್ನು ಹೋಗಗೊಡದೆ ನನ್ನನ್ನು ಎಡೆಬಿಡದೆ ಯಾವಾ

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಗಲೂ ನೆನೆಯುತ್ತಾನೋ, ಯಾವಾಗಲೂ ಮನಸ್ಸನ್ನು ಬಿಗಿಹಿಡಿದಿರುವ ಯೋಗಿಯಾದ ಅವನಿಗೆ ನಾನು ಅನಾಯಾಸವಾಗಿ ಕೈಸೇರುವೆನು.

ಮಾಮುಪೇತ್ಯ ಪುನರ್ಜನ್ಮ
ದುಃಖಾಲಯಮಶಾಶ್ವತಮ್ ।
ನಾಪ್ನುವಂತಿ ಮಹಾತ್ಮಾನಃ
ಸಂಸಿದ್ಧಿಂ ಪರಮಾಂ ಗತಾಃ ॥ 15

ನನ್ನನ್ನು ಪಡೆದವರೆಂದರೆ ಸಾಧನೆಯ ಕೊನೆಯ ಸಿದ್ಧಿಯನ್ನು ಪಡೆದವರು. ಅಂಥವರು ದುಃಖದ ತೌರುಮನೆಯಾದ ಮೂರು ದಿನದ ಬಾಳಿನ ಸಂಸಾರಕ್ಕೆ ಮತ್ತೆ ಮರಳಿ ಬರುವುದಿಲ್ಲ.

ಆಬ್ರಹ್ಮಭುವನಾಲ್ಲೋಕಾಃ
ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ
ಪುನರ್ಜನ್ಮ ನ ವಿದ್ಯತೇ ॥ 16

ಅರ್ಜುನ, ಬ್ರಹ್ಮಲೋಕವನ್ನು ಮೊದಲು ಮಾಡಿಕೊಂಡು ಎಲ್ಲ ಲೋಕಗಳನ್ನು ಪಡೆದಿರುವವರೂ ಮತ್ತೆ ಹುಟ್ಟುವವರೇ. ಅರ್ಜುನ, ನನ್ನನ್ನು ಪಡೆದರೆ ಮತ್ತೆ ಹುಟ್ಟುವಿಕೆ ಇಲ್ಲ.

ಸಹಸ್ರಯುಗಪರ್ಯಂತಮ್
ಅಹರ್ಯದ್ಬ್ರಹ್ಮಣೋ ವಿದುಃ ।
ರಾತ್ರಿಂ ಯುಗಸಹಸ್ರಾಂತಾಂ
ತೇಽಹೋರಾತ್ರವಿದೋ ಜನಾಃ ॥ 17

ಕಾಲಪರಿಮಾಣವನ್ನರಿತ ಜನರು ಸಾವಿರಾರು ಯುಗಗಳು ಭಗವಂತನ ಒಂದು ಹಗಲೆಂದೂ ಹಾಗೆಯೇ ಸಾವಿರಾರು ಯುಗಗಳನ್ನು ಒಂದು ರಾತ್ರಿಯೆಂದೂ ತಿಳಿಯುವರು.

ಅವ್ಯಕ್ತಾದ್ವ್ಯಕ್ತಯಃ ಸರ್ವಾಃ
ಪ್ರಭವಂತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯಂತೇ
ತತ್ರೈವಾವ್ಯಕ್ತಸಂಜ್ಞಕೇ ॥ 18

ಹಗಲು ಬರುವಾಗ ಚರಾಚರಗಳೆಲ್ಲ ಅವ್ಯಕ್ತನಾದ ಭಗವಂತನಿಂದ ಹುಟ್ಟುತ್ತವೆ. ಇರುಳಾದಾಗ ಅವು ಆ ಅವ್ಯಕ್ತದಲ್ಲಿಯೇ ಅಡಗುತ್ತವೆ.

ಭೂತಗ್ರಾಮಃ ಸ ಏವಾಯಂ
ಭೂತ್ವಾಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ
ಪ್ರಭವತ್ಯಹರಾಗಮೇ ॥ 19

ಅರ್ಜುನ, ಹಿಂದಿದ್ದ ಅದೇ ಈ ಚರಾಚರಗಳು ಹುಟ್ಟಿ ಹುಟ್ಟಿ ಇರುಳಾಗುತ್ತಲೇ ತನಗರಿವಿಲ್ಲದೆ ಅಡಗುತ್ತವೆ; ಹಗಲು ಬರುತ್ತಲೇ ಹುಟ್ಟುತ್ತವೆ.

ಪರಸ್ತಸ್ಮಾತ್ತು ಭಾವೋಽನ್ಯೋಽ
ವ್ಯಕ್ತೋಽವ್ಯಕ್ತಾತ್ ಸನಾತನಃ ।
ಯಃ ಸ ಸರ್ವೇಷು ಭೂತೇಷು
ನಶ್ಯತ್ಸು ನ ವಿನಶ್ಯತಿ ॥ 20

ಯಾವನು ಆ ಜಗತ್ತಿನ ಬೀಜಕ್ಕಿಂತಲು ಆಚೆಗೆ ಅಗೋಚರನಾಗಿರುವನೋ ಅವನು ಎಲ್ಲ ಚರಾಚರ ವಸ್ತುಗಳ ನಾಶವಾದರೂ ನಾಶವಾಗುವುದಿಲ್ಲ.

ಅವ್ಯಕ್ತೋಽಕ್ಷರ ಇತ್ಯುಕ್ತಃ
ತಮಾಹುಃ ಪರಮಾಂ ಗತಿಮ್ ।
ಯಂ ಪ್ರಾಪ್ಯ ನ ನಿವರ್ತಂತೇ
ತದ್ಧಾಮ ಪರಮಂ ಮಮ ॥ 21

ಅವ್ಯಕ್ತನಾದ ಭಗವಂತನೇ ನಾಶರಹಿತನಾದ ಅಕ್ಷರ ಪುರುಷನು. ಅವನೇ ಪರಮಗತಿ ಎಂದು ಹೇಳುತ್ತಾರೆ. ಯಾವುದನ್ನು ಹೊಂದಿದ ಮೇಲೆ ಮತ್ತೆ ಹುಟ್ಟು ಸಾವುಗಳಿಗೆ ತಿರುಗುವುದಿಲ್ಲವೋ ಅದೇ ನನ್ನ ದಿವ್ಯವಾದ ಸ್ವರೂಪವು.

ಪುರುಷಃ ಸ ಪರಃ ಪಾರ್ಥ
ಭಕ್ತ್ಯಾ ಲಭ್ಯಸ್ತ್ವನನ್ಯಯಾ ।
ಯಸ್ಯಾಂತಃಸ್ಥಾನಿ ಭೂತಾನಿ
ಯೇನ ಸರ್ವಮಿದಂ ತತಮ್ ॥ 22

ಅರ್ಜುನ, ಚರಾಚರ ವಸ್ತುಗಳೆಲ್ಲ ಯಾವನ ಒಳಗಿರುವುವೋ ಇವೆಲ್ಲವೂ ಯಾರಿಂದ ತುಂಬಿಕೊಂಡಿವೆಯೋ ಆ ಪರಮಪುರುಷನನ್ನು ಅನನ್ಯ ಭಕ್ತಿಯಿಂದ ಮಾತ್ರವೇ ಪಡೆಯುವುದು ಸಾಧ್ಯ.

ಯತ್ರ ಕಾಲೇ ತ್ವನಾವೃತ್ತಿಂ
ಆವೃತ್ತಿಂ ಚೈವ ಯೋಗಿನಃ ।
ಪ್ರಯಾತಾ ಯಾಂತಿ ತಂ ಕಾಲಂ
ವಕ್ಷ್ಯಾಮಿ ಭರತರ್ಷಭ ॥ 23

ಅರ್ಜುನ, ದೇಹವನ್ನು ಬಿಟ್ಟು ಹೊರಟವರು ಯಾವ ಕಾಲಾಭಿಮಾನಿ ದೇವತೆಗಳ ದಾರಿಯಲ್ಲಿ ಹೋಗಿ ತಿರುಗಿ ಬರದೆಇರುವಿಕೆಯನ್ನೂ ತಿರುಗಿ ಬರುವಿಕೆಯನ್ನೂ ಪಡೆಯುತ್ತಾರೋ, ಕಾಲಾಭಿಮಾನಿ ದೇವತೆಗಳಿರುವ ಆ ದಾರಿಯನ್ನು ಹೇಳುತ್ತೇನೆ.

ಅಗ್ನಿರ್ಜ್ಯೋತಿರಹಃ ಶುಕ್ಲಃ
ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ
ಬ್ರಹ್ಮ ಬ್ರಹ್ಮವಿದೋ ಜನಾಃ ॥ 24

ಅಗ್ನಿದೇವತೆ, ಜ್ಯೋತಿಯ ದೇವತೆ, ಹಗಲಿನ ದೇವತೆ, ಶುಕ್ಲಪಕ್ಷದ ದೇವತೆ, ಉತ್ತರಾಯಣದ ಆರು ತಿಂಗಳ ದೇವತೆ–ಇವರಿರುವ ದಾರಿಯಲ್ಲಿ ಹೋದ ಬ್ರಹ್ಮಜ್ಞಾನಿಗಳು ಭಗವಂತನನ್ನು ಪಡೆಯುವರು

ಧೂಮೋ ರಾತ್ರಿಸ್ತಥಾ ಕೃಷ್ಣಃ
ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿಃ
ಯೋಗೀ ಪ್ರಾಪ್ಯ ನಿವರ್ತತೇ ॥ 25

ಧೂಮದ ದೇವತೆ, ಇರುಳಿನ ದೇವತೆ, ಹಾಗೆಯೇ ಕೃಷ್ಣಪಕ್ಷದ ದೇವತೆ, ದಕ್ಷಿಣಾಯನದ ಆರು ತಿಂಗಳ ದೇವತೆ–ಇವರಿರುವ ದಾರಿಯಲ್ಲಿ ಹೋದ ಯೋಗಿಗಳು ಚಂದ್ರನ ಲೋಕವನ್ನು ಹೊಂದಿ ಮತ್ತೆ ಹಿಂದಿರುಗುತ್ತಾರೆ.

ಶುಕ್ಲಕೃಷ್ಣೇ ಗತೀ ಹ್ಯೇತೇ
ಜಗತಃ ಶಾಶ್ವತೇ ಮತೇ ।
ಏಕಯಾ ಯಾತ್ಯನಾವೃತ್ತಿಂ
ಅನ್ಯಯಾಽಽವರ್ತತೇ ಪುನಃ ॥ 26

ಈ ಬೆಳಕಿನ ಮತ್ತು ಕತ್ತಲೆಯ ದಾರಿಗಳೆರಡು ಜಗತ್ತಿನಲ್ಲಿ ಯಾವಾಗಲೂ ಇರುವವುಗಳೆನಿಸುವುವು. ಒಂದರಿಂದ ಹೋದವನು ತಿರುಗಿ ಬರುವುದಿಲ್ಲ; ಇನ್ನೊಂದರಿಂದ ಹೋದವನು ಮತ್ತೆ ತಿರುಗಿ ಬರುತ್ತಾನೆ.

ನೈತೇ ಸೃತೀ ಪಾರ್ಥ ಜಾನನ್
ಯೋಗೀ ಮುಹ್ಯತಿ ಕಶ್ಚನ ।
ತಸ್ಮಾತ್ಸರ್ವೇಷು ಕಾಲೇಷು
ಯೋಗಯುಕ್ತೋ ಭವಾರ್ಜುನ ॥ 27

ಅರ್ಜುನ, ಈ ಎರಡು ದಾರಿಗಳನ್ನು ತಿಳಿದ ಯೋಗಿಯು ಮೋಹಗೊಳ್ಳುವುದಿಲ್ಲ. ಅರ್ಜುನ, ಆದ್ದರಿಂದ ಎಲ್ಲ ಕಾಲಗಳಲ್ಲಿಯೂ ಧ್ಯಾನಯೋಗವನ್ನು ನಡೆಸುತ್ತಿರು.

ವೇದೇಷು ಯಜ್ಞೇಷು ತಪಸ್ಸು ಚೈವ
ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ
ಯೋಗೀ ಪರಂ ಸ್ಥಾನಮುಪೈತಿ
ಚಾದ್ಯಮ್ ॥ 28

ವೇದಗಳನ್ನು ಓದಿದರೆ, ಯಜ್ಞಗಳನ್ನು ಮಾಡಿದರೆ, ಉಪವಾಸ ಮೊದಲಾದ ತಪಸ್ಸನ್ನು ನಡೆಸಿದರೆ, ದಾನಮಾಡಿದರೆ ಯಾವ ಫಲವು ಶಾಸ್ತ್ರದಲ್ಲಿ ಹೇಳಿದೆಯೋ, ಅದೆಲ್ಲಕ್ಕಿಂತ ಮಿಗಿಲಾದ ಫಲವನ್ನು ಇದನ್ನರಿತ ಜ್ಞಾನಯೋಗಿ ಪಡೆಯುತ್ತಾನೆ ಮತ್ತು ಎಲ್ಲಕ್ಕೂ ಮೊದಲಿರುವ ಪರಮಪದವನ್ನು ಪಡೆಯುತ್ತಾನೆ.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಧ್ಯಾನಯೋಗೋ ನಾಮ ಅಷ್ಟಮೋಽಧ್ಯಾಯಃ ॥

8 ನೆಯ ಅಧ್ಯಾಯವು ಮುಗಿದುದು.

# ಹೆಚ್ಚಿನ ತಿಳಿವಳಿಕೆ

## ೯ ನೆಯ ಅಧ್ಯಾಯ

ಶ್ರೀ ಭಗವಾನುವಾಚ–

ಇದಂ ತು ತೇ ಗುಹ್ಯತಮಂ
ಪ್ರವಕ್ಷ್ಯಾಮ್ಯನಸೂಯವೇ ।
ಜ್ಞಾನಂ ವಿಜ್ಞಾನಸಹಿತಂ
ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ 1

ಶ್ರೀಕೃಷ್ಣ : ಯಾವುದನ್ನು ತಿಳಿದು ಅಮಂಗಲದಿಂದ ಪಾರಾಗಬಹುದೋ ಅಂಥ ರಹಸ್ಯವಾದ ಈ ಜ್ಞಾನವನ್ನೂ ಅದರ ವಿಸ್ತಾರವನ್ನೂ ಸತ್ಯದ ಬಗೆಗೆ ಅಸೂಯೆಯಿರದ ನಿನಗೆ ತಿಳಿಹೇಳುತ್ತೇನೆ.

ರಾಜವಿದ್ಯಾ ರಾಜಗುಹ್ಯಂ
ಪವಿತ್ರಮಿದಮುತ್ತಮಮ್ ।
ಪ್ರತ್ಯಕ್ಷಾವಗಮಂ ಧರ್ಮ್ಯಂ
ಸುಸುಖಂ ಕರ್ತುಮವ್ಯಯಮ್ ॥ 2

ಇದು ತಿಳಿವುಗಳಲ್ಲೆಲ್ಲ ಮೇಲಾದದ್ದು; ಬಹಳ ರಹಸ್ಯವಾದದ್ದು; ಪರಮ ಪವಿತ್ರವಾದದ್ದು; ನಮ್ಮ ಇಂದ್ರಿಯಗಳಲ್ಲಿ ನೆಲಸಿ ನಿಯಂತ್ರಿಸುತ್ತಿರುವ ಭಗವಂತನನ್ನು ತಿಳಿಸುವಂತಹದು. ಲೋಕಧಾರಕನಾದ ಭಗವಂತನ ವಿದ್ಯೆಯಿದು. ಇದರ ಆಚರಣೆ ಸುಲಭ. ಫಲವೋ ನಿಶ್ಚಿತ.

ಅಶ್ರದ್ದಧಾನಾಃ ಪುರುಷಾ
ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯ ಮಾಂ ನಿವರ್ತಂತೇ
ಮೃತ್ಯುಸಂಸಾರವರ್ತ್ಮನಿ ॥ 3

ಅರ್ಜುನ, ಈ ಧರ್ಮದಲ್ಲಿ ಶ್ರದ್ಧೆ ಇಲ್ಲದ ಜನರು ನನ್ನನ್ನು ಪಡೆಯದೆ ಸಾವಿನಿಂದ ಕೂಡಿದ ಸಂಸಾರದ ದಾರಿಯಲ್ಲಿ ಹಿಂದಿರುಗುವರು.

ಮಯಾ ತತಮಿದಂ ಸರ್ವಂ
ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ
ನ ಚಾಹಂ ತೇಷ್ವವಸ್ಥಿತಃ ॥ 4

ಈ ಎಲ್ಲ ಜಗತ್ತೂ ಕಣ್ಣಿಗೆ ಕಾಣದ ನನ್ನಿಂದ ತುಂಬಿರುವುದು. ಎಲ್ಲ ವಸ್ತುಗಳೂ ನನ್ನಲ್ಲಿರುವುವು ಆದರೆ ನಾನು ಅವುಗಳಲ್ಲಿಲ್ಲ.

ನ ಚ ಮತ್ಸ್ಥಾನಿ ಭೂತಾನಿ
ಪಶ್ಯ ಮೇ ಯೋಗಮೈಶ್ವರಮ್ ।
ಭೂತಭೃನ್ನ ಚ ಭೂತಸ್ಥೋ
ಮಮಾತ್ಮಾ ಭೂತಭಾವನಃ ॥ 5

ಎಲ್ಲ ವಸ್ತುಗಳೂ ನನ್ನೊಳಗಿಲ್ಲವೂ ಇಲ್ಲ. ನನ್ನ ಆಳಿಕೆಯ ಸಾಮರ್ಥ್ಯವನ್ನು ನೋಡು. ಎಲ್ಲವನ್ನೂ ಹುಟ್ಟಿಸುವ ನನ್ನ ಶರೀರವು ಜಗತ್ತನ್ನೆಲ್ಲ ಎತ್ತಿ ಹಿಡಿದುಕೊಂಡಿರುವುದು. ಆದರೂ ಜಗತ್ತಿನೊಳಡಕವಾಗಿಲ್ಲ.

ಯಥಾಽಽಕಾಶಸ್ಥಿತೋ ನಿತ್ಯಂ
ವಾಯುಃ ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ
ಮತ್ಸ್ಥಾನೀತ್ಯುಪಧಾರಯ ॥ 6

ಯಾವಾಗಲೂ ಎಲ್ಲೆಲ್ಲಿಯೂ ವ್ಯಾಪಿಸಿರುವ ಗಾಳಿಯು ಆಕಾಶದಲ್ಲಿರುವಂತೆ ಎಲ್ಲ ವಸ್ತುಗಳೂ ನನ್ನಲ್ಲಿರುವುವೆಂದು ತಿಳಿ.

ಸರ್ವಭೂತಾನಿ ಕೌಂತೇಯ
ಪ್ರಕೃತಿಂ ಯಾಂತಿ ಮಾಮಿಕಾಮ್ ।
ಕಲ್ಪಕ್ಷಯೇ ಪುನಸ್ತಾನಿ
ಕಲ್ಪಾದೌ ವಿಸೃಜಾಮ್ಯಹಮ್ ॥ 7

ಅರ್ಜುನ, ಕಲ್ಪವು ಮುಗಿಯುತ್ತಲೇ ಎಲ್ಲ ವಸ್ತುಗಳೂ ನನ್ನ ಮಾಯೆಯೊಳಡಕವಾಗುತ್ತವೆ. ಕಲ್ಪದ ಮೊದಲಲ್ಲಿ ಅವುಗಳನ್ನು ಮತ್ತೆ ನಾನು ಹೊರಗೆಡಹುತ್ತೇನೆ.

ಪ್ರಕೃತಿಂ ಸ್ವಾಮವಷ್ಟಭ್ಯ
ವಿಸೃಜಾಮಿ ಪುನಃ ಪುನಃ ।
ಭೂತಗ್ರಾಮಮಿಮಂ ಕೃತ್ಸ್ನಂ
ಅವಶಂ ಪ್ರಕೃತೇರ್ವಶಾತ್ ॥ 8

ನನ್ನ ಮಾಯಾಶಕ್ತಿಯನ್ನು ಮುಂದುಮಾಡಿಕೊಂಡು ಈ ಚರಾಚರ ವಸ್ತುಗಳೆಲ್ಲವನ್ನು ಅವುಗಳಿಗರಿವಿಲ್ಲದಂತೆ ಅವುಗಳ ಹುಟ್ಟುಗುಣಕ್ಕನುಗುಣವಾಗಿ ಮತ್ತೆ ಮತ್ತೆ ಹೊರಗೆಡಹುತ್ತೇನೆ.

ನ ಚ ಮಾಂ ತಾನಿ ಕರ್ಮಾಣಿ
ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಂ
ಅಸಕ್ತಂ ತೇಷು ಕರ್ಮಸು ॥ 9

ಅರ್ಜುನ, ಕರ್ಮಗಳಲ್ಲಿ ಆಸಕ್ತಿ ಇಲ್ಲದೆ ಸುಮ್ಮನೆ ನೋಡುತ್ತಿರುವವನಾಗಿರುವಂಥ ನನ್ನನ್ನು ಆ ಕರ್ಮಗಳು ಕಟ್ಟಿಗೊಳಪಡಿಸುವುದಿಲ್ಲ.

ಮಯಾಽಧ್ಯಕ್ಷೇಣ ಪ್ರಕೃತಿಃ
ಸೂಯತೇ ಸಚರಾಚರಮ್ ।
ಹೇತುನಾಽನೇನ ಕೌಂತೇಯ
ಜಗದ್ವಿಪರಿವರ್ತತೇ ॥ 10

ಅರ್ಜುನ, ನಿಯಾಮಕವಾದ ನನ್ನಿಂದ ಪ್ರೇರಿತವಾದ ಮಾಯಾಶಕ್ತಿಯು ಚರಾಚರವಾದ ಜಗತ್ತನ್ನು ಹಡೆಯುತ್ತದೆ ಈ ಕಾರಣದಿಂದಲೇ ಜಗತ್ತು ಬಗೆಬಗೆಯಾಗಿ ರೂಪುಗೊಳ್ಳುತ್ತಿರುವುದು.

ಅವಜಾನಂತಿ ಮಾಂ ಮೂಢಾಃ
ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನಂತೋ
ಮಮ ಭೂತಮಹೇಶ್ವರಮ್ ॥ 11

ಎಲ್ಲಕ್ಕೂ ಹಿರಿಯ ಒಡೆಯನಾದ ನನ್ನ ನಿಜಸ್ವರೂಪವನ್ನು ತಿಳಿಯದ ಅವಿವೇಕಿಗಳು ನನ್ನನ್ನು ಮನುಷ್ಯರಂತೆ ಭೌತಿಕ ದೇಹವುಳ್ಳವನೆಂದು ಅವಮಾನಗೊಳಿಸುತ್ತಾರೆ.

ಮೋಘಾಶಾ ಮೋಘಕರ್ಮಾಣೋ
ಮೋಘಜ್ಞಾನಾ ವಿಚೇತಸಃ ।
ರಾಕ್ಷಸೀಮಾಸುರೀಂ ಚೈವ
ಪ್ರಕೃತಿಂ ಮೋಹಿನೀಂ ಶ್ರಿತಾಃ ॥ 12

ಅಂಥವರ ಆಸೆ ಕೈಗೂಡದು. ಅವರ ಕರ್ಮ ಫಲ ಕೊಡದು, ಅವರ ಅರಿವು ಕೂಡ ವ್ಯರ್ಥ. ಅವಿವೇಕಿಗಳಾದ ಅಂಥವರು ಮೋಹಕವಾದ ನನ್ನ ಮಾಯಾಶಕ್ತಿಗೆ ಒಳಗಾಗಿ ರಾಕ್ಷಸರಂತೆ, ಆಸುರರಂತೆ ತಿಳಿಗೇಡಿ ಬಾಳನ್ನು ಬಾಳುತ್ತಾರೆ.

ಮಹಾತ್ಮಾನಸ್ತು ಮಾಂ ಪಾರ್ಥ
ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸೋ
ಜ್ಞಾತ್ವಾ ಭೂತಾದಿಮವ್ಯಯಮ್ ॥ 13

ಅರ್ಜುನ, ಮಹಾತ್ಮರಾದರೋ ದೈವೀಸ್ವಭಾವವನ್ನು ಅವಲಂಬಿಸಿ ನನ್ನನ್ನು ಎಂದಿಗೂ ನಾಶವಾಗದವನೆಂದೂ ಜಗತ್ತಿಗೆಲ್ಲ ಮೂಲನೆಂದೂ ತಿಳಿದು ಏಕಾಗ್ರಮನದಿಂದ ಭಜಿಸುತ್ತಾರೆ.

ಸತತಂ ಕೀರ್ತಯಂತೋ ಮಾಂ
ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ
ನಿತ್ಯಯುಕ್ತಾ ಉಪಾಸತೇ ॥ 14

ಅವರು ಯಾವಾಗಲೂ ನನ್ನನ್ನೇ ಹಾಡಿ ಹೊಗಳುತ್ತಾರೆ. ಪ್ರಯತ್ನಶೀಲರಾಗಿ ನನ್ನ ಪೂಜೆಯ ದೀಕ್ಷೆತೊಡುತ್ತಾರೆ. ಯಾವಾಗಲೂ ಭಕ್ತಿಯಿಂದ ನನ್ನನ್ನು ನಮಸ್ಕರಿಸುತ್ತ ನನ್ನಲ್ಲೇ ಮನಸ್ಸಿಟ್ಟು ಉಪಾಸನೆ ಮಾಡುತ್ತಾರೆ.

ಜ್ಞಾನಯಜ್ಞೇನ ಚಾಪ್ಯನ್ಯೇ
ಯಜಂತೋ ಮಾಮುಪಾಸತೇ ।
ಏಕತ್ವೇನ ಪೃಥಕ್ತ್ವೇನ
ಬಹುಧಾ ವಿಶ್ವತೋಮುಖಮ್ ॥ 15

ಇನ್ನು ಕೆಲವರು ಜಗತ್ತಿನ ಎಲ್ಲೆಡೆಯು ಪರಮಾತ್ಮನೊಬ್ಬನೇ ಎಂಬ ದೃಷ್ಟಿಯಿಂದಲೂ ಎಲ್ಲಕ್ಕಿಂತ ವಿಲಕ್ಷಣವಾದ ಅವನೇ ಬೇರೆ ಬೇರೆ ರೂಪದಲ್ಲಿ ಬೆಳಗುತ್ತಿರುವನೆಂಬ ದೃಷ್ಟಿಯಿಂದಲೂ ವಿಶ್ವರೂಪಿಯಾದ ನನ್ನನ್ನು ತಿಳಿವಳಿಕೆಯೆಂಬ ಯಜ್ಞದಿಂದ ಪೂಜಿಸುತ್ತ ಉಪಾಸನೆ ಮಾಡುತ್ತಾರೆ.

–(ಸಶೇಷ)

# ನಾರದರು ಹಾಗೂ ಭಕ್ತಿಸೂತ್ರಗಳು

ಋಷಿಪುಂಗವರಲ್ಲಿ ಮಹರ್ಷಿ ನಾರದರು ಶ್ರೇಷ್ಠರು. ತಮ್ಮ ಅಖಂಡ ಬ್ರಹ್ಮಚರ್ಯೆಯಿಂದ, ತಪಸ್ಸಿನಿಂದ ಶ್ರೀಮನ್ನಾರಾಯಣನನ್ನು ಮೆಚ್ಚಿಸಿ ಒಲಿಸಿಕೊಂಡ ಪರಮಭಕ್ತರು.

ಇವರ ಭಕ್ತಿಗೆ, ಅಪೂರ್ವ ಸಂಗೀತ ಮಾಧುರ್ಯಕ್ಕೆ ಮರುಳಾಗಿ ಭಗವಂತ, ಇವರು ಕರೆದಾಗ ಕಾಣಿಸಿಕೊಳ್ಳುವ ಕಟ್ಟಳೆಗೆ ಒಳಗಾಗಿದ್ದಾನೆ. ಈತ ಸದಾ ಸಂಚಾರಪ್ರಿಯ. ಹರಿನಾಮ ಸಂಕೀರ್ತನೆಯನ್ನು ಮಾಡುತ್ತಾ ಜಗತ್ತಿನ ಕಲ್ಯಾಣಕ್ಕಾಗಿ ಹಲವಾರು ಮನ್ವಂತರಗಳಿಂದ ನಿಂತಲ್ಲಿ ನಿಲ್ಲದೆ ತಂಬೂರಿಯನ್ನು ಬಾರಿಸುತ್ತಾ ಭಕ್ತಿ ಭಾವವನ್ನು ಎಲ್ಲಾ ಲೋಕಗಳಿಗೆ ಪ್ರಚಾರ ಮಾಡುವ ಪರಿವ್ರಾಜಕ.

ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಮಾನಸ ಪುತ್ರರಾಗಿ ಜನಿಸಿ ಅನನ್ಯ ಬ್ರಹ್ಮಚಾರಿಯಾಗಿ ಭಗವದ್ಭಕ್ತರಾಗಿ ಮೆರೆದ ಮಹಾಪುರುಷ. ವೈವಸ್ವತ ಮನ್ವಂತರದಲ್ಲಿ ಕಶ್ಯಪ ಋಷಿಗೆ ಗಂಧರ್ವ ಕನ್ಯೆಯಲ್ಲಿ ಮಗನಾಗಿ ಜನಿಸಿ ಸಂಗೀತ ಸಾಮ್ರಾಟನಾಗಿ ಮೆರೆದ ಗಂಧರ್ವ. ಮುಂದಿನ ಜನ್ಮದಲ್ಲಿ ಶೂದ್ರಪುತ್ರನಾಗಿ ಋಷಿ ಆಶ್ರಮದಲ್ಲಿ ಬೆಳೆದು ಬಂದು ಜಪ, ತಪ, ನಿಯಮ ಅನುಷ್ಠಾನಗಳಿಂದ ತನ್ನ ಶುಶ್ರೂಷೆ ಸೇವಾಮನೋಭಾವಗಳಿಂದ ಋಷಿಗಳನ್ನೂ ಶ್ರೀಮನ್ನಾರಾಯಣನನ್ನು ಸಾಕ್ಷಾತ್ಕಾರ ಮಾಡಿಕೊಂಡ ಪುಣ್ಯಜೀವಿ. ಪರ್ವತಮುನಿಯ ಸೋದರಮಾವ.

ಯುಗಯುಗದಲ್ಲಿ ವೈಷ್ಣವಭಕ್ತರಾಗಿ ಆಪತ್ತಿಗೆ ಸಿಲುಕಿದವರ ರಕ್ಷಣೆಗೆ ಹೋಗಿ ತಮ್ಮ ಬುದ್ಧಿಶಕ್ತಿಯಿಂದ ಅವರ ಸಂಕಟಗಳನ್ನು ನಿವಾರಿಸುವ ಸ್ನೇಹಜೀವಿ. ಮೂರು ಲೋಕಗಳಿಗೆ ಮಂಗಳವನ್ನುಂಟುಮಾಡುವ ಮಹರ್ಷಿ, ವೈರಾಗ್ಯಶಾಲಿ. ಎಲ್ಲರಿಗೂ ಬೇಕಾದ ಪ್ರೀತಿಯ ಪವಿತ್ರ ಪುರುಷ. ವಾಯುವೇಗ ಮನೋವೇಗಗಳಿಂದ ಯಾವ ಲೋಕಕ್ಕೂ ಹೋಗಬಲ್ಲ ಸಾಮರ್ಥ್ಯವುಳ್ಳ ಸತ್ಪುರುಷ. ದೇವ, ದಾನವ, ಗೋ, ಬ್ರಾಹ್ಮಣ ಋಷಿ ಗಂಧರ್ವ ಎಲ್ಲಾ ಜೀವಿಗಳಿಗೂ ಬೇಕಾದ ಬ್ರಹ್ಮರ್ಷಿ, ಗಾನಪ್ರಿಯ ಋಗ್ವೇದದಲ್ಲಿ ನಾರದರ ಸೂತ್ರಗಳಿವೆ. ಈತನಿಲ್ಲದ ಪುರಾಣವಿಲ್ಲ, ಸ್ಮೃತಿಯಿಲ್ಲ. ಕ್ಲಿಷ್ಟಕಾಲದಲ್ಲಿ ಕಲ್ಪನೆಗೆ ಮೀರುವಂತಹ ಸಲಹೆ ನೀಡುವ ನಿಸ್ವಾರ್ಥಿ. ದೇವವೀಣೆಯನ್ನು ಸರಸ್ವತಿಯ ಜೊತೆ ಹಾಡಬಲ್ಲ ಏಕೈಕ ಸಂಗೀತ ಜಗದ್ಗುರು, ಮಾರ್ಗದರ್ಶಿ, ಲೋಕಹಿತೈಷಿ. ತ್ರೇತಾಯುಗದಲ್ಲಿ ಶ್ರೀರಾಮನಿಗೆ ಯುಗಧರ್ಮವನ್ನು ಬೋಧಿಸಿದ ಬುದ್ಧಿಜೀವಿ. ಮೇಲಾಗಿ ಹಿಂದುಗಳ ಪವಿತ್ರ ಗ್ರಂಥವಾದ ರಾಮಾಯಣವನ್ನು ಬರೆಯಲು ಆದಿಕವಿ ವಾಲ್ಮೀಕಿ ಋಷಿಗಳಿಗೆ ರಾಮಾಯಣ ಕಥಾಸಾರವನ್ನು ತಿಳಿಸಿ ಅವರನ್ನು ಪ್ರೋತ್ಸಾಹಿಸಿ ಹುರಿದುಂಬಿಸಿದವರು ನಾರದರು. ಶ್ರೀ ಮದ್ವಾಲ್ಮೀಕಿ ರಾಮಾಯಣದ ಮೊದಲಿನ ಶ್ಲೋಕದಲ್ಲಿ ಉಕ್ತವಾಗಿರುವಂತೆ,

ತಪಃ ಸ್ವಾಧ್ಯಾಯ ನಿರತಂ  
ತಪಸ್ವೀ ವಾಗ್ವಿದಾಂ ವರಮ್ ।  
ನಾರದಂ ಪರಿಪಪ್ರಚ್ಛ  
ವಾಲ್ಮೀಕಿರ್ಮುನಿ ಪುಂಗವಮ್ ॥

ತಪಸ್ಸು ಮತ್ತು ವೇದಾಧ್ಯಯನದಲ್ಲಿ ನಿರಂತರ ನಿರತರೂ ವಾಗ್ವಿಶಾರದರೂ ಆದ ನಾರದ ಮಹರ್ಷಿಗಳನ್ನು ಸ್ತುತಿಸಿ ರಾಮಾಯಣ ಮಹಾಕಾವ್ಯ ರಚಿಸಲ್ಪಡುತ್ತೆ. ರಾಮಾಯಣದಂತಹ ಪರಮಮಂಗಳಕರವಾದ ಸುಂದರವಾದ ರಮ್ಯವಾದ ಕಾವ್ಯವನ್ನು ಲೋಕಕ್ಕೆ ನೀಡಲು ಪ್ರೇರಕ ಶಕ್ತಿ ನಾರದರು. ಹೀಗೆ ತ್ರೇತಾಯುಗ ಕಾಲದಿಂದಲೂ ತ್ರೈಲೋಕ್ಯ ಪೂಜ್ಯರು. ದ್ವಾಪರ ಯುಗದಲ್ಲಿ ಎಲ್ಲಾ ಕಾಲದಲ್ಲೂ ಪಾಂಡವರಿಗೆ, ಕೃಷ್ಣನಿಗೆ ಸಲಹೆನೀಡುವ ಸಹೃದಯಿ. ಮತ್ಸ್ಯ ಪುರಾಣ ಹಾಗೂ ಮನುಸ್ಮೃತಿಗಳ ಪ್ರಕಾರ ಈತ ಹತ್ತನೆಯ ಪ್ರಜಾಪತಿ. ಬ್ರಹ್ಮವೈವರ್ತ ಪುರಾಣದ ಪ್ರಕಾರ ಈತ ಶಪಿತ ಗಂಧರ್ವ, ಮಂತ್ರ ದ್ರಷ್ಟಾರ, ಉಪನಿಷತ್ ಋಷಿ, ಪುರಾಣಪ್ರಿಯ, ಪ್ರಹ್ಲಾದನ ಗುರು, ಸತೀಸಾವಿತ್ರಿಗೆ ಉಪದೇಶ ನೀಡಿದ ಪುಣ್ಯವಂತ. ವಾಯು ಪುರಾಣದ ಪ್ರಕಾರ ದಕ್ಷನಿಂದ ಶಪಿತನಾದ ನಾರದರು ಬ್ರಹ್ಮನಿಂದ ರಕ್ಷಿಸಲ್ಪಡುತ್ತಾರೆ. ಮಹಾಭಾರತದಲ್ಲಿ ಪಾಂಡವರು ದ್ರೌಪದಿಯನ್ನು ಸ್ವಯಂವರದಲ್ಲಿ ಗೆದ್ದುಬಂದಾಗ ಐವರೂ ಕ್ರಮವಾಗಿ ಒಂದೊಂದು ವರ್ಷ ಪ್ರಕಾರ ದ್ರೌಪದಿಯೊಡನೆ ಸಂಸಾರ ಮಾಡುವಂತೆ ಸಲಹೆ ನೀಡಿದರು. ಪಾಂಡವರು ರಾಜ್ಯವನ್ನು ಕಳೆದುಕೊಂಡಾಗ ಅವರನ್ನು ಸಂತೈಸಿ ವೈರಾಗ್ಯವನ್ನು ಕೃಷ್ಣಭಕ್ತಿಯನ್ನು ಬೋಧಿಸಿದರು. ಮಹಾಭಾರತವನ್ನು ಬರೆದ ಮೇಲೆ ವ್ಯಾಸರಿಗೆ ತೃಪ್ತಿ ಸಿಗದಿರಲು ಭಾಗವತವನ್ನು ಬರೆಯುವಂತೆ ವ್ಯಾಸರಿಗೆ ಉಪದೇಶ ಮಾಡಿದ ಮೇಲೆ ವ್ಯಾಸರು ಭಕ್ತಿಪಂಥಕ್ಕೆ ಶಿರೋಧಾರ್ಯವಾದ ಭಾಗವತವನ್ನು ಬರೆದರು. ಇಲ್ಲಿ ನಾರದ ವಾಕ್ಯ ಚಿರಸ್ಮರಣೀಯ.

ಭವತಾನುದಿತ ಪ್ರಾಯಂ  
ಯಶೋ ಭಗವತೋಽಮಲಮ್ ।  
ಯೇನೈವಾಸೌ ನ ತುಷ್ಯೇತ  
ಮನ್ಯೇ ತದ್ದರ್ಶನಂ ಖಿಲಮ್ ॥  
ಯಥಾ ಧರ್ಮಾದಯಶ್ಚಾರ್ಥಾ  
ಮುನಿವರ್ಯಾನುಕೀರ್ತಿತಾಃ ।  
ನ ತಥಾ ವಾಸುದೇವಸ್ಯ  
ಮಹಿಮಾಹ್ಯನುವರ್ಣಿತಃ ॥

– ಎಲೈ ಮುನಿವರ್ಯ ನೀನು ಮಹಾಭಾರತ ಮುಂತಾದುವುಗಳಲ್ಲಿ ಶ್ರವಣಾಪಠಣಾದಿಗಳಿಂದ ಭಗವಂತನ ಮಹಿಮೆಯನ್ನು ಸೂಕ್ಷ್ಮವಾಗಿ ಹೇಳಿದ್ದರೂ ಅದನ್ನು ಪೂರ್ಣವಾಗಿ ಆ ಪರಮಾತ್ಮನ ಸ್ವರೂಪ, ರೂಪವಿಭವಾದಿ ಗುಣಗಳನ್ನು ಯಥಾಸ್ಥಿತವಾಗಿ ಹಾಡಿಲ್ಲ, ಆದ್ದರಿಂದಲೇ ನಿನ್ನ ಆತ್ಮಕ್ಕೆ ತೃಪ್ತಿಯಿಲ್ಲ. ಹೃದಯದಲ್ಲಿ ಏನೋ ಕೊರತೆ ಕಾಣುತ್ತಿದೆ. ಭಗವಂತನ ಮಹಿಮೆಯನ್ನು ತಿಳಿಸುವಂತಹ ಮಹಾಕಾವ್ಯ ರಚಿಸು. ಇದು ಮನುಷ್ಯರ ಸಮಸ್ತ ಬಂಧನಗಳನ್ನು ಬಿಡಿಸಿ ಮುಕ್ತಿಗೆ ಒಯ್ಯುವ ಸೋಪಾನವಾಗುತ್ತದೆ' ಎಂದು ತಿಳಿಸಿದಾಗ ಶ್ರೀಮದ್ಭಾಗವತವು ರಚಿಸಲ್ಪಟ್ಟಿತು. ಭಗವದ್ಗುಣಾನುಭವವೇ ಮಾನವನ ನಿರತಿಶಯ ಪುರುಷಾರ್ಥ. ಶ್ರಿಯಃಪತಿಯ ಧ್ಯಾನವೇ ಪರಮೋಪಾಯ. ಸಂಸಾರದಲ್ಲಿ ತೊಳಲುತ್ತಿರುವ ಜೀವಿಗಳಿಗೆ ಭಗವದ್ಭಕ್ತಿಯೇ ಆಶ್ರಯ. ಶ್ರೀ ನಾರದರ ಭಕ್ತಿ ಸೂತ್ರಗಳು ಈ ಮೇಲಿನ ಸಿದ್ಧಾಂತಗಳನ್ನು ಗುರಿಯಿಟ್ಟುಕೊಂಡೇ ಮಾನವ ಕಲ್ಯಾಣಕ್ಕಾಗಿ ಕೊಟ್ಟ ಭಾಗವತ ತತ್ತ್ವದ ಸೂತ್ರಗಳು. ಬದರೀಕಾಶ್ರಮದಲ್ಲಿ ನರನಾರಾಯಣರೊಡನೆ ತಪಸ್ಸು ಮಾಡುವ ಯೋಗ್ಯತೆ ಪಡೆದ ಋಷಿವರ್ಯ ನಾರದರ ಭಕ್ತಿ ಸೂತ್ರಗಳು ಸದಾ ಸ್ಮರಣೀಯವಾದವು. ವೇದ

ಶ್ರೀ ಕಂದಾಡೈ ಕೇಶವನ್

ಪುರಾಣ ಇತಿಹಾಸ ಉಪಾಖ್ಯಾನ ಉಪನಿಷತ್ ಗಳ ಸಾರವೇ ಈ ಭಕ್ತಿ ಸೂತ್ರಗಳು. ಅಂತಹ ನಾರದ ಭಕ್ತಿಸೂತ್ರಗಳನ್ನು ಸೂಕ್ಷ್ಮಪರಿಚಯ ಮಾಡಿಕೊಳ್ಳುವ.

ನಾರದರ ಭಕ್ತಿ ಸೂತ್ರಗಳು ಒಟ್ಟು 84. ಐದು ಅಧ್ಯಾಯಗಳಲ್ಲಿ ಭಕ್ತಿಯ ಮಹತ್ವ, ಸಾಧನೆ, ಸ್ವರೂಪ ಲಕ್ಷಣಗಳ ವಿವರ ನಾವು ಕಾಣ ಬಹುದು.

ಮೊದಲನೆಯ ಅಧ್ಯಾಯದಲ್ಲಿ 'ಭಕ್ತಿಯು ಪರಮಪ್ರೇಮಪೂರ್ವಕವಾದುದು. ಅದು ಅಮೃತ ಸ್ವರೂಪವಾದುದು. ಭಕ್ತಿ ಎಂದರೆ ಭಗವಂತನನ್ನು ಭೂಮನೆಂದು ತಿಳಿದು ಅನನ್ಯ ಮನಸ್ಸಿನಿಂದ ಪ್ರೀತಿಸುವುದು' ಎನ್ನಲಾಗಿದೆ.

"ತಸ್ಮಿನ್ನನನ್ಯತಾ ತದ್ವಿರೋಧಿಷು ಉದಾಸೀನತಾ"— ಅಂದರೆ ಪರಮಾತ್ಮನನ್ನು ಎಡಬಿಡದೆ ನಿರಂತರವೂ ತೈಲಧಾರೆಯಂತೆ ಅನನ್ಯ ಭಾವದಿಂದ ನೆನೆಯುವುದು, ಪರಮಾತ್ಮನಲ್ಲದೆ ಮತ್ತೆ ಯಾವುದನ್ನೂ ಚಿಂತಿಸದಿರುವುದು. ಪರಮಾತ್ಮನ ಭಕ್ತಿಗೆ ವಿರೋಧವಾದ ಎಲ್ಲವನ್ನೂ ಉದಾಸೀನ ಭಾವದಿಂದ 'ಅನ್ಯಾಶ್ರಯಾಣಾಂ ತ್ಯಾಗೋಽನನ್ಯತಾ'—ಭಗವಂತನೊಬ್ಬನೇ ಭಕ್ತನ ಗುರಿ. ಗೀತಾಚಾರ್ಯನ ಮಾತು

ಸರ್ವ ಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ ।
ಅಹಂ ತ್ವಾಂ ಸರ್ವ ಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾ ಶುಚಃ ॥

ಎಂಬುವ ಪರಮಮಂತ್ರ. ಚರಮ ಶ್ಲೋಕದ ಅನುಸಂಧಾನ ಭಕ್ತನಿಗೆ ಉಪಾಧಾನ ಹಾಗೂ ಪರಮೋಪಾಯ. ಭಕ್ತಿಯ ಲಕ್ಷಣಗಳನ್ನು ಹೇಳುತ್ತಾ ನಾರದರು,

"ಪೂಜಾದೀಷ್ವನುರಾಗಃ ಇತಿ ಪಾರಾಶರ್ಯಃ"— ಪರಾಶರಸುತರಾದ ವ್ಯಾಸರ ಮತದಂತೆ ಈಶ್ವರ ಪೂಜಾದಿಗಳಲ್ಲಿ ಆಸಕ್ತಿಯೇ ಭಕ್ತಿ. ಅರ್ಚಾವತಾರಿಯಾದ ಪರಮಾತ್ಮನನ್ನು ಪೂಜಾದಿಗಳಿಂದ ಪೂಜಿಸುವುದೇ ಭಕ್ತಿ. "ಕಥಾದಿಷ್ವಿತಿ ಗರ್ಗಃ" ಭಗವಂತನ ಕಥೆ ಕವನಗಳನ್ನು ಕೇಳುವುದು ಕೀರ್ತಿಸುವುದು ಅದರ ಪ್ರೀತಿ, ನೀತಿ, ನಿಷ್ಠೆಗಳೇ ಗರ್ಗರ ಪ್ರಕಾರ ಭಕ್ತಿ. ಶಾಂಡಿಲ್ಯರ ಭಕ್ತಿ ಸೂತ್ರಗಳ ಪ್ರಕಾರ ಪರಮಾತ್ಮನನ್ನು ಹೃದಯದಲ್ಲಿ ಧ್ಯಾನಿಸುವುದು ಪರಮಭಕ್ತಿ.

"ನಾರದಸ್ತು ತದರ್ಪಿತ ಅಖಿಲಾಚಾರಿತಾ ತದ್ವಿಸ್ಮರಣೇ ಪರಮ ವ್ಯಾಕುಲತೇತಿ"

'ಸಮಸ್ತವನ್ನೂ ಭಗವಂತನಲ್ಲಿ ಅರ್ಪಣೆ ಮಾಡುವ ಮನೋಭಾವ ಅವನನ್ನು ಮರೆಯುವುದರಿಂದ ಆಗುವ ಪರಮ ವ್ಯಾಕುಲತೆ ಭಕ್ತಿಯ ಲಕ್ಷಣ'— ಎಂಬುವುದು ನಾರದರ ಮತ.

ಇದಕ್ಕೆ ಉದಾಹರಣೆ "ಯಥಾ ವ್ರಜಗೋಪಿಕಾನಾಂ" ಎಂಬಂತೆ ಗೋಕುಲದ ಗೋಪಿಯರ ದೃಷ್ಟಾಂತ. ಪರಾಭಕ್ತಿಗೆ ಉದಾಹರಣೆ ಕೊಡಬೇಕಾದರೆ ಗೋಪಿಯರು ನಮ್ಮ ಕಣ್ಮುಂದೆ ಬರುತ್ತಾರೆ. ತಮ್ಮ ತನು ಮನ ಧನ ಮಾನಗಳನ್ನು ಕೃಷ್ಣನಲ್ಲೇ ಅರ್ಪಿಸಿ ಶ್ರೀ ಕೃಷ್ಣನನ್ನೇ ಪ್ರಾಣನಾಥನನ್ನಾಗಿ ಸ್ವೀಕರಿಸಿ ಅವನನ್ನೇ ನಿಶ್ಚಲ ಭಕ್ತಿಯಿಂದ ನಂಬಿ ಅವನಲ್ಲೇ ನೆಟ್ಟ ಮನಸ್ಸುಳ್ಳವರಾಗಿ ನಿರಂತರ ಧ್ಯಾನಿಸುವ ಗೋಪಿಯರ ಪ್ರೇಮವೇ ಪರಮ ಪ್ರೇಮ ಸ್ವರೂಪವಾದುದು. ಅಮೃತ ಸ್ವರೂಪವಾದುದು. ಅವರ ಅನನ್ಯ ಭಕ್ತಿಗೆ ಸಾಟಿಯೇ ಇಲ್ಲ. ಒಬ್ಬ ಮಹಾತ್ಮರು ಗೋಪಿಯರನ್ನು ಕುರಿತು,

ವಂದೇ ನಂದ ವ್ರಜಸ್ತ್ರೀಣಾಂ
ಪಾದರೇಣು ಮಭೀಕ್ಷ್ಣಶಃ ।
ಯಾಸಾಂ ಹರಿಕಥೋದ್ಗೀತಾ
ಪುನಾತಿ ಭುವನತ್ರಯಮ್ ॥

ಗೋಪಿಯರು ಮೆಟ್ಟಿದಭೂಮಿ ಪುನೀತವಾಯಿತು ಎಂದು ಸಾರಿದ್ದಾರೆ.

ಎರಡನೆಯ ಅಧ್ಯಾಯದಲ್ಲಿ 9 ಸೂತ್ರಗಳಿವೆ. ಇಲ್ಲಿ ನಾರದರು ಭಕ್ತಿಯ ಮಹತ್ವವನ್ನು ಹೇಳುತ್ತಾರೆ. ಕರ್ಮ, ಜ್ಞಾನ ಯೋಗಗಳಿಗಿಂತ ಭಕ್ತಿ ಶ್ರೇಷ್ಠವಾದದ್ದು. ಪರಮಾತ್ಮ ಅಹಂಕಾರವನ್ನು ಸಹಿಸಲಾರ, ದೈನ್ಯತೆಯನ್ನು ಸ್ವೀಕರಿಸುತ್ತಾನೆ. ಕರ್ಮಯೋಗ ಜ್ಞಾನಯೋಗಗಳಲ್ಲಿ ಸ್ವಾಭಿಮಾನ ಅಹಂಕಾರಗಳಿಗೆ ಸ್ಥಳವಿದೆ. ಭಕ್ತಿಯೋಗದಲ್ಲಿ ದೈನ್ಯತೆ ಪ್ರಧಾನ. ಆದಕಾರಣ ಮುಮುಕ್ಷುಗಳಿಗೆ ಪರಭಕ್ತಿಯೇ ಸಾಧನ, ಸಾಧ್ಯ ಹಾಗೂ ಫಲ.

ಮೂರನೆಯ ಅಧ್ಯಾಯದಲ್ಲಿ ಭಕ್ತಿಯ ಸಾಧನಗಳನ್ನು ವಿವರಿಸುತ್ತಾರೆ. ಇಲ್ಲಿ 17 ಸೂತ್ರಗಳಿವೆ. ಭಕ್ತನು ಪರಮಭಕ್ತಿಯ ಮೆಟ್ಟಿಲನ್ನು ಹತ್ತಿದಾಗ ವಿಷಯತ್ಯಾಗ ಹಾಗೂ ಸಂಗತ್ಯಾಗದಿಂದ ದೂರವಿರುತ್ತಾನೆ. ಭಗವಂತನ ಕಡೆ ಹೋಗಬೇಕಾದರೆ ಭಕ್ತನು ವಿಷಯಸುಖದಿಂದ ವಿಮುಖನಾಗಿರಬೇಕು. ಪ್ರಾಪಂಚಿಕ ವಿಷಯದಿಂದ ದೂರವಿರಬೇಕು. "ಅವ್ಯಾವೃತ್ತ (ತ) ಭಜನಾತ್" ಎಂಬಂತೆ ಏಕಾಗ್ರತೆಯಿಂದ ನಿರಂತರ ಭಗವದ್ಗುಣ ಭಜನೆಯಿಂದ ಶ್ರವಣ ಕೀರ್ತನಾದಿಗಳಿಂದ ಭಕ್ತಿಯು ಲಭಿಸುವುದು. ಈಶ್ವರನ ಸ್ಮರಣ, ಪೂಜನ ಜಪ ಮನನಗಳು ಭಜಿಸುವ ಸಾಧನೆಗಳು. ಅದಕ್ಕಾಗಿಯೇ ನಾರದರು "ಲೋಕೇಽಪಿ ಭಗವದ್ಗುಣ ಶ್ರವಣ ಕೀರ್ತನಾತ್" ಎಂಬುದಾಗಿ


# ಸಪ್ತಗಿರಿ ಯನ್ನು ಬೆಳೆಸಿರಿ

ಸನಾತನ ಧರ್ಮವನ್ನು ಹರಡಲು ಪರಿಶ್ರಮಿಸುತ್ತಿರುವ ಸಪ್ತಗಿರಿ ಮಾಸ ಪತ್ರಿಕೆ ಓದುಗರ ಸಂಪೂರ್ಣ ಸಹಕಾರದ ಅಗತ್ಯ ಹೊಂದಿದೆ. ನೀವು ಈ ಪತ್ರಿಕೆಯನ್ನು ನಿಮ್ಮ ಬಂಧುಗಳಿಗೆ, ಮಿತ್ರರಿಗೆ ನಿಮ್ಮ ಕಾಣಿಕೆಯಾಗಿ ನೀಡಬಹುದು. ಒಂದು ವರ್ಷದ ಚಂದಾ ಹಣವನ್ನು ನಮಗೆ ಕಳುಹಿಸಿ. ನಿಮ್ಮ ಪರವಾಗಿ ನೀವು ಹೆಸರಿಸುವವರಿಗೆ ಒಂದು ವರ್ಷ ಸಪ್ತಗಿರಿಯನ್ನು ಕಳುಹಿಸಲಾಗುತ್ತದೆ. ಕೆಳಗಣ ಕೂಪನ್ ಅನ್ನು ತುಂಬಿ ಹನ್ನೆರಡು ರೂಗಳ ಎಂ. ಓ., ಡಿ. ಡಿ. ಅನ್ನು ಕಳುಹಿಸಿರಿ.

ಮಾನ್ಯರೆ :

ಸಪ್ತಗಿರಿಯನ್ನು ಒಂದು ವರ್ಷ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿರಿ.
............ರೂಗಳ ಎಂ. ಓ/ ಡಿ. ಡಿ. ಕಳುಹಿಸಿದ್ದೇನೆ.

ಸಹಿ.

(ಬಿಡಿಬಿಡಿಯಾದ ದಪ್ಪ ಅಕ್ಷರದಲ್ಲಿ ಬರೆಯಿರಿ)

ಹೆಸರು ............................................

ವಿಳಾಸ ............................................

**ವೆಲ್‌ಫೇರ್ ಆಫೀಸರ್**
ಸೇಲ್ಸ್ ವಿಂಗ್
ತಿ. ತಿ. ದೇ. ತಿರುಪತಿ.—ಇವರಿಗೆ.

ಹೇಳುತ್ತಾರೆ. ಭಗವಂತನ ಗುಣಗಳನ್ನು ಗಾನ ಮಾಡುವುದು ಅವನ ಕರ್ತವ್ಯ. ಅಂತಹ ಭಕ್ತಿ ಸಾಧಾರಣವಾಗಿ ಮಹಾತ್ಮರ ಕೃಪೆ, ಕಟಾಕ್ಷದಿಂದ ಬರುವುದು. ಮಹಾತ್ಮರ ಸಂಗ ದುರ್ಲಭ ಅಗಮ್ಯ ಆದರೆ ಅಮೋಘ. ಅವರ ಸಂಗದಿಂದ ಜನರು ಪುನೀತರಾಗುತ್ತಾರೆ. ವಾತಾವರಣ ಪವಿತ್ರವಾಗುತ್ತೆ. ಭಗವಂತನಿಗೂ ಅವನ ಭಕ್ತರಿಗೂ ಯಾವ ಭೇದವೂ ಇಲ್ಲ. ಭಗವಂತನು ತನ್ನ ಭಕ್ತರ ಪರಾಭವವನ್ನು ಸಹಿಸಲಾರ. ಭಕ್ತ ಪ್ರಹ್ಲಾದನನ್ನು ಹಿಂಸಿಸಿದ ಅವನ ತಂದೆಯನ್ನೇ ಸಂಹರಿಸಿದ. ಸ್ವತಃ ಸೀತಾದೇವಿಯು ಲಕ್ಷ್ಮಣನಲ್ಲಿ ಅಪಚಾರ ಮಾಡಿದಾಗ ಅದರ ಪಾಪಕ್ಕೆ ರಾವಣನ ಸೆರೆಮನೆವಾಸ ಅನುಭವಿಸಬೇಕಾಯಿತು. ಭಕ್ತ ಅಂಬರೀಷನನ್ನು ಕೆಣಕಿದ ದುರ್ವಾಸರು ಅವಮಾನಕ್ಕೆ ಒಳಗಾಗಬೇಕಾಯಿತು. ಧ್ರುವನಿಗೆ ಶಾಶ್ವತವಾದ ಪಟ್ಟವನ್ನಿತ್ತ. ತನ್ನ ಭಕ್ತರಾದ ಪಂಚಪಾಂಡವರ ರಕ್ಷಣೆಗೆ ಸದಾ ನಿರತನಾದ. ಭಕ್ತಿಯ ಸಾಧನದಲ್ಲಿ ದುಷ್ಟರ ಸಂಗವನ್ನು ಬಹುತೇಕ ತ್ಯಜಿಸಬೇಕು. ಕಾರಣ ದುಃಸಂಗದಿಂದಲೇ ಕಾಮ, ಕ್ರೋಧ, ಮೋಹ, ಸ್ಮೃತಿ ಭ್ರಂಶ, ಬುದ್ಧಿನಾಶ, ಸಂಭವಿಸಿ ಕೊನೆಯಲ್ಲಿ ಸರ್ವನಾಶಕ್ಕೆ ಕಾರಣವಾಗುತ್ತದೆ. ಯಾರು ಸಂಗವನ್ನು ತ್ಯಜಿಸುತ್ತಾರೋ ಅವರು ಮಾಯೆಯನ್ನು ದಾಟುತ್ತಾರೆ. ಯಾರು ನಿರ್ಜನ ಪ್ರದೇಶದಲ್ಲಿ ಏಕಾಂತ ಸ್ಥಳದಲ್ಲಿ ಭಗವಂತನನ್ನು ಪ್ರಾರ್ಥನೆ ಮಾಡುತ್ತಾರೋ ಅವರು ಪ್ರಾಪಂಚಿಕ ಬಂಧನಗಳನ್ನು ದಾಟಿ ಪರಮಾತ್ಮನಲ್ಲಿ ಸೇರುತ್ತಾರೆ. ಸತ್ವ ರಜಸ್ ತಾಮಸಾದಿ ಗುಣಗಳಿಂದ ಅತೀತರಾಗುತ್ತಾರೆ.

ನಾಲ್ಕನೆಯ ಅಧ್ಯಾಯದಲ್ಲಿ ಪ್ರೇಮಸ್ವರೂಪವನ್ನು ವಿವರಿಸುತ್ತಾರೆ. ಪ್ರೇಮ ಪೂರ್ವಕವಾದ ಭಕ್ತಿ ಅನಿರ್ವಚನೀಯ – ಮಾತಿಗೆ ಮೀರಿದ್ದು, ಮನಸ್ಸಿಗೆ ಸಿಲುಕದು, ಕಾಮರಹಿತವಾದುದು, ಪ್ರತಿಕ್ಷಣ ವೃದ್ಧಿಹೊಂದುತಕ್ಕದ್ದು, ಅವಿಚ್ಛಿನ್ನವಾದುದು, ಸೂಕ್ಷ್ಮತರವಾಗಿ ಅನುಭವವೇದ್ಯವಾದುದು. ಭಗವಂತನ ಪ್ರೇಮ ವಾಹಿನಿಯಲ್ಲಿ ಮಿಂದ ಭಕ್ತ ಅವನನ್ನೇ ಎಲ್ಲೆಡೆಯಲ್ಲೂ ಕಾಣುತ್ತಾನೆ. ಅವನ ವಿಷಯವನ್ನೇ ಕೇಳುತ್ತಾನೆ, ಚಿಂತಿಸುತ್ತಾನೆ, ಮಾತನಾಡುತ್ತಾನೆ. ಭಕ್ತಿಯಲ್ಲಿ ಗೌಣೀ ಹಾಗೂ ಪರಾಭಕ್ತಿ ಎಂಬುವುದಾಗಿ ಎರಡು ವಿಧ. ಇದುವರೆಗೂ ವಿವರಿಸಿದ್ದು ಪರಾಭಕ್ತಿಯ ವಿಚಾರ. ಗೌಣೀಭಕ್ತಿ ಕೆಳಗಿನ ಮಟ್ಟದ್ದು. ಅದು ಗುಣಭೇದ ಮತ್ತು ಆತ್ಮಭೇದಗಳಿಂದ ಕೂಡಿದ್ದು. ಗೌಣೀ ಭಕ್ತಿಯು ಗುಣಕ್ಕೆ ಸಂಬಂಧಪಟ್ಟ ತಾಮಸಿಕ ರಾಜಸಿಕ ಹಾಗೂ ಸಾತ್ವಿಕಗುಣ ಪ್ರಧಾನ ಸ್ವಭಾವಗಳದ್ದು. ಗೌಣೀ ಭಕ್ತನ ಆರ್ತದಲ್ಲಿ ಅರ್ಥಾರ್ಥಿ, ಜಿಜ್ಞಾಸು, ಆರ್ತ, ಎಂಬ ಭೇದಗಳಿವೆ.

ಅರ್ಥಾರ್ಥಿ ಭಗವಂತನನ್ನು ಲೌಕಿಕ ವಿಷಯಕ್ಕೆ ಯಾಚಿಸುತ್ತಾನೆ. ತನ್ನ ಕಷ್ಟ ನಿವಾರಣೆಗಾಗಿ ಪ್ರಾರ್ಥನೆ ಅಥವಾ ಸಂಪತ್ ಪ್ರಾಪ್ತಿಗಾಗಿ ಪ್ರಾರ್ಥನೆ.

ಎರಡನೆಯವನಾದ ಜಿಜ್ಞಾಸು 'ಪ್ರಪಂಚ ಮಿಥ್ಯೆ ಬ್ರಹ್ಮಸತ್ಯ ಪರಮಾತ್ಮನ ಚಿಂತನೆಯೇ ಶ್ರೇಯಸ್ಸು' ಎಂಬುವ ಭಾವವನ್ನು ಬೆಳಸಿಕೊಳ್ಳುತ್ತಾನೆ

ಮೂರನೆಯವನಾದ ಆರ್ತ ಭಗವಂತನಿಗಾಗಿ ಹಂಬಲಿಸುವ ಭಕ್ತ, ಅವನನ್ನು ಪಡೆಯುವ ಅಪೇಕ್ಷೆಯುಳ್ಳವ. ಯಾವುದೇ ರೀತಿಯಲ್ಲಿ ಭಗವಂತನನ್ನು ಬೇಡುವ ಮನುಷ್ಯ. ಕ್ರಮೇಣ ಪರಮಾತ್ಮನನ್ನೇ ಪ್ರೀತಿಸುತ್ತಾನೆ. ಪರಾಭಕ್ತಿಯ ಮೆಟ್ಟಿಲನ್ನು ತಲುಪಬೇಕಾದರೆ ಗೌಣೀ ಮೆಟ್ಟಲನ್ನು ತುಳಿಯಬೇಕು.



ನಾರದರು ಮುಂದುವರಿಯುತ್ತಾ ಎಲ್ಲಾ ಸಾಧನೆಗಳಿಗಿಂತ ಭಕ್ತಿಮಾರ್ಗವು ಸುಲಭವಾದದು ಎನ್ನುತ್ತಾರೆ. ಇದಕ್ಕೆ ಪ್ರಮಾಣ ಬೇಕಿಲ್ಲ, ಕಾರಣ ಭಕ್ತಿ ಶಾಂತಿಯನ್ನು ತರುತ್ತದೆ. ಪರಮಾನಂದವನ್ನು ನೀಡುತ್ತದೆ. ಭಕ್ತ ಪ್ರಪಂಚದ ಕಷ್ಟನಷ್ಟಗಳಿಗೆ ಹೆದರಬೇಕಾಗಿಲ್ಲ. ಏಕೆಂದರೆ ಅವನು ತನ್ನ ಆತ್ಮವನ್ನು ಲೋಕಸಂಗ್ರಹಕ್ಕಾಗಿ ಭಗವಂತನಲ್ಲಿ ಅರ್ಪಿಸಿರುತ್ತಾನೆ. ಭಕ್ತನು ಪರಭಕ್ತಿ ಪಡೆದಮೇಲೂ ಲೋಕದಲ್ಲಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ತ್ಯಜಿಸಬಾರದು. ಫಲದಲ್ಲಿ ಆಸಕ್ತಿಯಿಲ್ಲದೆ ಕರ್ಮದಿಂದ ಬರುವ ಫಲವನ್ನು ತ್ಯಾಗಮಾಡಿ ನಿಷ್ಕಾಮಕರ್ಮಯೋಗಿಯಾಗಿ ಬಾಳಬೇಕು. ಕಾರಣ ನಾವು ಲೋಕಕಲ್ಯಾಣವನ್ನು ಮಾಡಬೇಕು. ನಮ್ಮ ಪಾಲಿಗೆ ಬಂದ ಕರ್ಮಗಳನ್ನು ಮಾಡುತ್ತಾ ಅದರ ಫಲವನ್ನು ಪರಮಾತ್ಮನಿಗೆ ಅರ್ಪಿಸಿದರೆ ಸುಖ ಸಂತೋಷ ಶಾಂತಿಯನ್ನು ಪಡೆಯಬಹುದು. ಕರ್ಮದ ಫಲಾಸಕ್ತಿ ಇಲ್ಲದಿರುವುದೇ ಹಿರಿಯ ಭಕ್ತರ ಲಕ್ಷಣ. ಅಂತಹ ಭಕ್ತನು ಸ್ತ್ರೀ ಧನಗಳ ವ್ಯಾಮೋಹ ತ್ಯಜಿಸಬೇಕು. ನಾಸ್ತಿಕರ ಚರಿತ್ರೆ ಕೇಳಬಾರದು. ಅಹಂಕಾರ ಅಭಿಮಾನ ಧಂಬಾದಿಗಳನ್ನು ತ್ಯಜಿಸಬೇಕು. ಭಗವಂತನನ್ನು ನಿತ್ಯದಾಸನಂತೆ ನಿತ್ಯಕಾಂತೆಯಂತೆ ಪ್ರೇಮ ಮಾಡಬೇಕು.

ಐದನೆಯ ಅಧ್ಯಾಯದಲ್ಲಿ ಭಕ್ತನ ಮಹಿಮೆ ನಿಜವಾದ ಭಕ್ತನ ಹಿರಿಯಲಕ್ಷಣಗಳನ್ನು ವಿವರವಾಗಿ ನಾರದರು ವಿವರಿಸುತ್ತಾರೆ. ಭಗವಂತನಲ್ಲಿ ನಿಶ್ಚಲ ಪ್ರೇಮವುಳ್ಳ ಏಕಾಂತಿಕ ಭಕ್ತನೇ ಶ್ರೇಷ್ಠ, ಇವರು ತಮ್ಮ ಕುಲವನ್ನು ಪಾವನಮಾಡಿ ಪೃಥ್ವಿಯನ್ನು ಪಾವನಗೊಳಿಸುತ್ತಾರೆ. ಇಂತಹ ಭಕ್ತರು ಬಂದ ತೀರ್ಥಸ್ಥಳ ಪವಿತ್ರವಾಗುತ್ತದೆ. ಅವರು ಆಚರಿಸುವ ಎಲ್ಲಾ ಕರ್ಮಗಳು ಸುಕರ್ಮಗಳಾಗುತ್ತವೆ. ಅವರು ಯಾವಾಗಲೂ ಭಗವಂತನಲ್ಲೇ ತನ್ಮಯವಾಗಿರುತ್ತಾರೆ. ಇಂತಹ ಭಕ್ತರನ್ನು ಕಂಡ ಪಿತೃದೇವತೆಗಳು ಸಂತೋಷಗೊಳ್ಳುತ್ತಾರೆ. ದೇವತೆಗಳು ನಲಿವಿನಿಂದ ನೃತ್ಯ ಮಾಡುತ್ತಾರೆ.

"ಮೋದಂತಿ ಪಿತರೋ ನೃತ್ಯಂತಿ ದೇವತಾಃ
ಸನಾಥಾ ಚೇಯಂ ಭೂರ್ಭವತಿ"

ಭಕ್ತರು ತಮ್ಮ ಸಂಪರ್ಕದಿಂದ ಹಲವಾರು ಜೀವಿಗಳನ್ನು ಉದ್ಧಾರ ಮಾಡುತ್ತಾರೆ. ಪವಿತ್ರ ವಾತಾವರಣ ಉಂಟಾಗಿ ಸತ್ಯ ಧರ್ಮಾಚರಣೆಗಳು ಭೂಮಿಯಲ್ಲಿ ನೆಲೆಗೊಳ್ಳುತ್ತವೆ. ಆದ್ದರಿಂದ ಭೂಮಿ ಸನಾಥತೆಯನ್ನು ಹೊಂದುತ್ತದೆ. ಇಂತಹ ಭಕ್ತರಲ್ಲಿ ಜಾತಿ ವಿದ್ಯೆ ರೂಪ ಗುಣ ಕುಲ ಭೇದಗಳಿಲ್ಲ. ಏಕೆಂದರೆ ಅವರೆಲ್ಲರೂ ಒಂದೇ ಕುಟುಂಬದವರು. ದೇವರ ಕಿಂಕರರು, ಸರ್ವದಾ ಸರ್ವಭಾವದಿಂದ ಪರಮಾತ್ಮನನ್ನು ಅವನ ಸೃಷ್ಟಿಯನ್ನು ಪ್ರೀತಿಸುವುದೊಂದೇ ಅವರ ಗುರಿ, ಅವರ ತತ್ತ್ವ. ಭಗವಂತನಿಗೆ ಸಂಬಂಧ ಪಟ್ಟ ವಿಷಯವೆಲ್ಲವೂ ಅವರಿಗೆ ಇಷ್ಟ ಪ್ರತಿಕ್ಷಣವೂ ಅವರಿಗೆ ಅಮೂಲ್ಯ.

"ಅಹಿಂಸಾ ಸತ್ಯ ಶೌಚದಯಾಸ್ತಿಕ್ಯಾದಿ
ಚಾರಿತ್ರಾಣಿ ಪರಿಪಾಲನೀಯಾನಿ"

ಭಕ್ತನು ಅಹಿಂಸೆ, ಸತ್ಯ, ಶೌಚ, ದಯೆ, ಆಸ್ತಿಕ್ಯ, ಬುದ್ಧಿ ಮುಂತಾದ ಗುಣಗಳನ್ನು ಪರಿಪಾಲಿಸಬೇಕು, ಭಕ್ತಿಯಿಂದ ಭಜಿಸುವ ಭಕ್ತನನ್ನು ಭಗವಂತ ಬಹು ಬೇಗನೆ ಭವಸಾಗರದಿಂದ ಪಾರುಮಾಡುತ್ತಾನೆ. ಎಲ್ಲಾ ಕಾಲಕ್ಕೂ ಭಕ್ತಿಯೇ ಸತ್ಯ, ಅದೇ ಶ್ರೇಷ್ಠತರವಾದುದು.

ಭಕ್ತನಲ್ಲಿ ಪರಭಕ್ತಿ ಹನ್ನೊಂದು ವಿಧಗಳಲ್ಲಿ ಪ್ರಕಟವಾಗುತ್ತವೆ, ಅವುಗಳು ಕ್ರಮವಾಗಿ ಭಗವಂತನ ಗುಣಮಹಾತ್ಮೆಯಲ್ಲಿ ಆಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯತಾಸಕ್ತಿ, ಹಾಗೂ ಪರಮ ವಿರಹಾಸಕ್ತಿ. ಇವುಗಳಿಗೆ ಇಂದು ಕಂಡು ಬರುವ ಉದಾಹರಣೆಗಳೆಂದರೆ ವೇದ ಉಪನಿಷತ್ತು, ಪುರಾಣ ಇತಿಹಾಸಗಳೇ. ಅಲ್ಲಿ ಬರುವ ಋಷಿಭಕ್ತಾದಿಗಳು ಭಗವಂತನ ಗುಣ ಕಥನ ಮಾಡುವುದನಲ್ಲಿ, ವ್ಯಾಸ, ಪರಾಶರ, ಶುಕ ಸನಕಾದಿ ಋಷಿವರ್ಯರು, ರೂಪದಲ್ಲಿ ಕುಂತಿ, ಗೋಪಿಯರು, ಪರಮಾತ್ಮನ ಪೂಜೆಯಲ್ಲಿ ರಾಮಾನುಜ,ಮಧ್ವರು, ಅಂಬರೀಷ, ಭರತರ ಭಕ್ತಿ ಪಾದುಕಾಪೂಜೆ, ಸ್ವಾಮಿಯ ಸ್ಮರಣೆಯಲ್ಲಿ ಶ್ರೀ ನಾರದ ಶಾಂಡಿಲ್ಯ ಧ್ರುವ ಪ್ರಹ್ಲಾದರು, ದಾಸ್ಯಾಸಕ್ತಿಯಲ್ಲಿ ನಿರತರಾದ ಗರುಡ ಆಂಜನೇಯರು. ಸಖ್ಯಭಾವವನ್ನು ಬೆಳೆಸಿಕೊಂಡ ಅರ್ಜುನ, ಸುಧಾಮರು, ಕಾಂತಾಸಕ್ತಿಯಲ್ಲಿ ತಮ್ಮ ತನುಗಳನ್ನು ತೇದ ಆಂಡಾಳ್, ಮೀರಾ, ಅಕ್ಕ ಮಹಾದೇವಿ. ಆತ್ಮ ನಿವೇದನೆಯನ್ನು ಮಾಡಿಕೊಂಡ ವ್ರಜಗೋಪಿಯರು ಹಾಗೂ ರಾಧೆ, ವಿಭೀಷಣ ಹಾಗೂ ಬಲಿಚಕ್ರವರ್ತಿಗಳು ತನ್ಮಯತೆಗೆ ಉದ್ಧವ, ಗರ್ಗ, ಆಳ್ವಾರುಗಳು ಹಾಗೂ ಸಂತ ಚೈತನ್ಯರು ಪರಮ ವಿರಹಾಸಕ್ತಿಗೆ ಮೀರಾ ಹಾಗೂ ಭಕ್ತ ಜಯದೇವರು.

ಕೊನೆಯ ಎರಡು ಸೂತ್ರಗಳಲ್ಲಿ ನಾರದರು ತಮ್ಮ ಆಚಾರ್ಯ ಭಕ್ತ ಸಮೂಹವನ್ನು ಸ್ಮರಿಸಿಕೊಂಡು ಭಾಗವತ ಪಂಥಕ್ಕೆ ಮಂಗಳಾಶಾಸನ ಮಾಡಿದ್ದಾರೆ.

ಇತ್ಯೇವಂ ವದಂತಿ ಜನ ಜಲ್ಪ ನಿರ್ಭಯಾಃ
ಏಕಮತಾಃ ಕುಮಾರ ವ್ಯಾಸ ಶುಕ ಶಾಂಡಿಲ್ಯ
ಗರ್ಗ ವಿಷ್ಣು ಕೌಂಡಿನ್ಯ ಶೇಷೋದ ವಾರುಣಿ
ಬಲಿ ಹನುಮತ್ ವಿಭೀಷಣಾದಯೋ
ಭಕ್ತ್ಯಾಚಾರ್ಯಾಃ

ಈ ಮೇಲ್ಕಂಡ ಭಕ್ತರು ತಮ್ಮದೇ ಆದ ಹಾದಿಯಲ್ಲಿ ಭಕ್ತಿ ಭಂಡಾರವನ್ನು ಬೆಳೆಸಿ ಪೋಷಿಸಿ ಜಗತ್ತಿಗೆ ಉಪಕಾರ ಮಾಡಿದ ಪ್ರಾತಃ ಸ್ಮರಣೀಯರು.

ಯಾರು ನಾರದರು ಹೇಳಿದ ಈ 84 ಸೂತ್ರಗಳಲ್ಲಿ ವಿಶ್ವಾಸ, ಶ್ರದ್ಧೆ ತೋರುತ್ತಾರೋ ಅವರು ಭಗವಂತನನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

ಪದ್ಮ ಪುರಾಣದಲ್ಲಿ ಪರಮಾತ್ಮನು ನಾರದರನ್ನು ಕುರಿತು.

ನಾಹಂ ವಸಾಮಿ ವೈಕುಂಠೇ
ಯೋಗಿನಾಂ ಹೃದಯೇ ನ ಚ।
ಮದ್ಭಕ್ತಾ ಯತ್ರ ಗಾಯಂತಿ
ತತ್ರ ತಿಷ್ಠಾಮಿ ನಾರದ॥

ವೈಕುಂಠದಲ್ಲಿ ನಾನು ನೆಲೆಸಿರುವುದಿಲ್ಲ, ಯೋಗಿಗಳ ಹೃದಯಾಂತರಾಕಾಶದಲ್ಲಿ ಇರುವುದಿಲ್ಲ. ನನ್ನ ಭಕ್ತರು ಎಲ್ಲಿ ನನ್ನ ಗಾನ ಮಾಡುವರೋ ಅಲ್ಲಿ ನಾನು ಇರುತ್ತೇನೆ – ಎಂಬುವುದಾಗಿ ಹೇಳುತ್ತಾನೆ. ಆದ್ದರಿಂದ ನಾರದರು ಸದಾ ಭಗವಂತನ ನಾಮಸ್ಮರಣೆಯನ್ನು ಗಾನ ಮಾಡುತ್ತಿರುತ್ತಾರೆ. ಪರಮಾತ್ಮನ ನಿರ್ಹೇತುಕಕರುಣೆ ನಾರದರ ಮೇಲೆ ಯಾವಾಗಲೂ ಇರುವುದರಿಂದಲೇ ನಾರದರ ಬಗ್ಗೆ ಸ್ವಾಮಿಗೆ ಅಪಾರವಾದ ವಾತ್ಸಲ್ಯ.

ನಾರದರ ಭಕ್ತಿ ಸೂತ್ರಗಳನ್ನು ನಾವು ಅಧ್ಯಯನ ಮಾಡಿದ ಮೇಲೆ ನಮಗೆ ಬರುವ ಜ್ಞಾನ ಅಪಾರವಾದುದು. ಭಕ್ತನಿಗೆ ಎಂತಹ ಕಷ್ಟಗಳು ಬಂದರೂ ಪರಮಾತ್ಮ ತನ್ನನ್ನು ರಕ್ಷಿಸುತ್ತಾನೆಂಬ ದೃಢವಿಶ್ವಾಸ ಬಂದ ತಕ್ಷಣ ಭಕ್ತಿಯು ಆವಿರ್ಭಾವವಾಗುತ್ತೆ. ಕಲ್ಪನಾತೀತ ಕಷ್ಟಗಳು ಬಂದಾಗ ಅವುಗಳನ್ನು ಎದುರಿಸುವ ಜ್ಞಾನ, ಉಪಾಯ, ಹರಿನಾಮ ಸ್ಮರಣೆ. ಭಕ್ತನು ಕರೆದಾಗ ಹರಿಯು ಓಡಿಬರುವನೆಂಬ ಉದಾಹರಣೆಗಳು ಅಪಾರ, ಆದರೆ ನಾರದರ ಕರೆಗೆ ಸ್ವಾಮಿ ಸದಾಸಿದ್ಧ, ‘ಅನುಗಾಲವು ಚಿಂತೆ ಮನುಜಗೆ ಮನಹೋಗಿ ಮಾಧವನ ಒಡಗೂಡುವ ತನಕ’ ಎಂಬುವ ಪುರಂದರದಾಸರ ಕೀರ್ತನೆ ಭಕ್ತಿಮಾರ್ಗಕ್ಕೆ ಸಾಧನ. ಭಗವದ್ಭಕ್ತಿ ಹುಟ್ಟುವಾಗಲೇ ಎಲ್ಲರಲ್ಲೂ ಇದ್ದರೂ ಅದ್ಯುಬೆಳೆಯಲು ಫಲವತ್ತಾದ ಭೂಮಿ ಕಾಲ ಪರಿಸರಗಳು ಬೇಕು. ಯೋಗ್ಯಗುರುವಿನ ಅವಶ್ಯಕತೆಯೂ ಬೇಕು. ಈ ಮಾರ್ಗದಲ್ಲಿ ಜಗದ್ಗುರುಗಳಾದ ಶ್ರೀ ನಾರದರ ಭಕ್ತಿ ಸೂತ್ರಗಳೇ ನಮಗೆ ಸುಲಭವಾಗಿ ಸಿಕ್ಕುವ ಗುರುವಿನ ಉಪದೇಶ. ಅದನ್ನು ಓದಿದ ಮೇಲೆ ‘ಜೀವನ ಅಸ್ಥಿರ, ಈಶನೊಬ್ಬನೇ ಸ್ಥಿರ. ನಮಗೆ ಜನ್ಮ ಜನ್ಮಾಂತರಗಳಿಂದ ಬಂದಂತಹ ಪ್ರಾರಬ್ಧ ಕರ್ಮಗಳ ಬಂಧನದಿಂದ ಬಿಡುಗಡೆಯಾಗಬೇಕಾದರೆ ಭಕ್ತನಾಗಿ ಭವಬಂಧನದಿಂದ ಮುಕ್ತನಾಗಿ ಮುಕುಂದನ ಮನೆ ಸೇರಬೇಕು’. ಇದಕ್ಕೆ ಒಂದೇ ಸುಲಭವಾದ ದಾರಿ ನಾರದರ ಭಕ್ತಿ ಸೂತ್ರಗಳ ಪಠನ, ತತ್‌ಜ್ಞಾನ, ಅದರ ನಿಷ್ಠೆ.

ಪುರಂದರದಾಸರು ತಮ್ಮ ಉಗಾಭೋಗಗಳಲ್ಲಿ ಕಲಿಯುಗದಲ್ಲಿ ಹರಿಕೀರ್ತನೆಯೇ ಶ್ರೇಷ್ಠ ಎಂಬುವುದಾಗಿ ಹೇಳುವಾಗ

“ಮಾನವನು ಕೃತಯುಗದಿ ಮಾಡಬೇಕು
ತಪವನು
ಜ್ಞಾನ ಸಾಧನ ಬೇಕು ತ್ರೇತಾಯುಗದಿ।
ಏನೆಂಬೆ ದ್ವಾಪರದಿ ಯಜ್ಞ ಸಾಧನಬೇಕು
ಗಾನ ದಾನ ಬೇಕು ಕಲಿಯುಗದಿ
ಪುರಂದರವಿಠಲ॥”

ಇದನ್ನು ಪೋಷಿಸುವಂತೆ ನಾರದರು ಗಾನದಿಂದ ಗರುಡಗಮನನನ್ನು ಸೆರೆಹಿಡಿದಿದ್ದಾರೆ. ಅವರ ಭಕ್ತಿ ಸೂತ್ರಗಳು ಸರ್ವದಾ ಕಲಿಯುಗದಲ್ಲಿ ನಮಗೆ ಅನುಷ್ಠಾನಕ್ಕೆ ಯೋಗ್ಯವಾಗಿವೆ. ★

## ಪ್ರತ್ಯೇಕ ಕಲ್ಯಾಣೋತ್ಸವ

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

ಆರ್ಜಿತ ಕಲ್ಯಾಣೋತ್ಸವ ಮಾಡಿಸುವ ಆಸಕ್ತ ಭಕ್ತರಿಗೆ ಮತ್ತೊಂದು ಸುವಾರ್ತೆ ಎಂದರೆ; ಕಲ್ಯಾಣೋತ್ಸವವನ್ನು ರೂ. 500–00 ಶುಲ್ಕದಲ್ಲಿ ನಡೆಸುವ ಕ್ರಮವನ್ನು ಜಾರಿಗೆ ತರಲಾಗಿರುವುದು. ಇದರಲ್ಲಿ ಗೃಹಸ್ಥರನ್ನೂ ಸೇರಿಸಿ ಐದು ಜನರಿಗೆ ಮಾತ್ರ ಪ್ರವೇಶ. ಮಿಕ್ಕಂತೆ ಎಲ್ಲವೂ ರೂ. 2000–00 ಕಲ್ಯಾಣೋತ್ಸವದಂತೆಯೇ.

ಆಸ್ತಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿ.

**ತಿ. ತಿ. ದೇ.**



ಬ್ರಾಹ್ಮೀ



ಕೌಮಾರೀ

# ಸಪ್ತಮಾತೃಕೆಯರು

ದೇವಾಲಯಗಳು ಕಲಾಕೃತಿಯೊಂದರ ಅಭಿವ್ಯಕ್ತಿಯಾಗಿ, ಧರ್ಮ–ದರ್ಶನಗಳ ಪ್ರತೀಕ–ಅಭಿವ್ಯಂಜಕಗಳಾಗಿ ದೇಶದ ಉದ್ದಗಲಕ್ಕೂ ಹರಡಿನಿಂತಿವೆ. ವಿವಿಧರೀತಿಯ ಆರಾಧನಾ ಪದ್ಧತಿಗಳನ್ನು ಇಂದಿನ ದೇವಾಲಯಗಳಲ್ಲಿ ಕಾಣುವುದರೊಂದಿಗೆ, ಧಾರ್ಮಿಕ ಘಟನಾವಳಿಗಳ ವ್ಯಾಖ್ಯಾನವನ್ನೂ ಇಲ್ಲಿಂದ ಅರಿಯಬಹುದಾಗಿದೆ. ಮಾನವನಲ್ಲಿ ಏಳುವ ಸಂದೇಹಗಳಿಗೆ ಉತ್ತರವನ್ನು ನೀಡುವುದರ ಜೊತೆಗೆ ಅವನ ಹೃದಯ ಬುದ್ಧಿಗಳ ಬೇಡಿಕೆಯನ್ನು ಸಹಾ ಪೂರೈಸುತ್ತಾ, ವಾಸ್ತು ಶಿಲ್ಪದ ಪದ್ಧತಿಗೆ ಅನುಗುಣವಾಗಿ ಸಾಕ್ಷೀಭೂತವಾಗಿ ಇವು ಉಳಿದಿವೆ.

ಹಿಂದೂಧರ್ಮವು ವಿಭಿನ್ನ ಪ್ರಕಾರಗಳ ಆರಾಧನಾ ಕ್ರಮಗಳ ವಿಚಿತ್ರ ಮೇಳನ. ಹಲವಾರು ಶತಮಾನಗಳಿಂದ ಹರಿದು ಬಂದಿರುವ ಭಕ್ತಿಮಾರ್ಗವು ಬೇರೆ ಬೇರೆ ಕವಲುಗಳಾಗಿ ಒಡೆದಿದೆ. ಶಿಲ್ಪಿಯೊಬ್ಬನ ಸ್ಫೂರ್ತಿಯ ದೈವೀಕಲ್ಪನೆಯಿಂದಾಗಿ, ಬಳಪದ ಅಥವಾ ಕಗ್ಗಲ್ಲಿನಲ್ಲಿ ಆಕಾರವನ್ನು ತಳೆದ ಮೂರ್ತಿಗಳ ಆರಾಧನೆಗಾಗಿ ಅರ್ಚನಾವಿಧಿಯೂ ಹುಟ್ಟಿಕೊಂಡಿದೆ. ಇಂತಹ ವಿಧಿಯೊಂದರ ಆಚರಣೆ ಬೇರೆ ಬೇರೆ ಸಂಪ್ರದಾಯಗಳ ರೂಢಿಗೆ ಕಾರಣವಾಗಿದೆ. ಶೈವ–ವೈಷ್ಣವ ಪಂಥಗಳ ಜೊತೆಗೆ 'ಶಾಕ್ತ' ಪಂಥವೂ ಸೇರಿಕೊಂಡಿದೆ. ವೈದಿಕ – ಪೌರಾಣಿಕ ವಿವರಗಳಷ್ಟೇ ಅಲ್ಲದೆ 'ತಾಂತ್ರಿಕ' ವಿಧಾನವೂ ಬೆಳೆದು ಬಂದಿದೆ.

ಮಾತೃಪೂಜಾ ಪದ್ಧತಿಯು 'ತಾಂತ್ರಿಕ ನೆಲೆಯ' ಆಧಾರದ ಮೇಲೆ ಆರಂಭವಾದದ್ದು. ಇತಿಹಾಸದ ಒತ್ತಡದಿಂದ ಇಂದು ಇದು ಖಂಡ ತುಂಡವಾಗಿದೆ. 'ಏಕೋದೇವಃ ಶಿವೋ ವಾ ಕೇಶವೋ ವಾ'– ಎಂಬ ಪ್ರಾಚೀನ ಮಾರ್ಗವೊಂದಿದ್ದರೂ, ಶೈವರು ಶಿವನನ್ನೂ, ವೈಷ್ಣವರು ವಿಷ್ಣುವನ್ನೂ, ಸೌರರು ಸೂರ್ಯನನ್ನೂ, ಆರಾಧಿಸಿಕೊಂಡು ಬಂದಿದ್ದಾರೆ. ಶಕ್ತಿದೇವತೆಯರಲ್ಲೂ ಈ ಭಾವನೆಯು ಮೈದಳೆದು ಗಂಡುದೇವತೆಗಳಿಗೆ ಹೆಣ್ಣು ದೇವತೆಗಳನ್ನು ಶಕ್ತಿಯರೆಂದು ಅಳವಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಬೆಳೆದು ಬಂದಿರುವುದೇ 'ಸಪ್ತಮಾತ್ರಕೆ'ಯರ ಆರಾಧನೆ.

'ಸಪ್ತಮಾತೃಕೆ'ಯರು ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷವಿ, ವಾರಾಹಿ, ಇಂದ್ರಾಣಿ, ಚಾಮುಂಡಿಗಳೆಂಬುದಾಗಿ ಒಟ್ಟು ಏಳು ಜನ ಶಕ್ತಿಯರು. ಇವರಲ್ಲಿ ಬ್ರಾಹ್ಮಿಗೆ ಮೊದಲು ವೀರಭದ್ರನನ್ನು, ಚಾಮುಂಡಿಯ ನಂತರ ಗಣೇಶನನ್ನು ಪಾರ್ಶ್ವ ದೇವತೆಗಳಾಗಿ ಇರಿಸುವ ಪದ್ಧತಿಯಿದೆ. ಇಂತಹ ಮಾತೃಗಣವನ್ನು ಶೈವ ದೇವಾಲಯಗಳಲ್ಲಿ – ವಿಶೇಷವಾಗಿ – ಏಕಶಿಲಾಪಟ್ಟಿಕೆಯ ಮೇಲೆ ಕೂರಿಸುವ ಪರಿಪಾಠ ಉಳಿದು ಬಂದಿದೆ. ಕೆಲವೊಮ್ಮೆ ಈ 'ಸಪ್ತಮಾತೃಕೆ' ಯರಿಗಾಗಿಯೇ ಪ್ರತ್ಯೇಕ ಆಲಯವನ್ನೂ ಕಟ್ಟಿರುವುದನ್ನು ಗಮನಿಸಬಹುದಾಗಿದೆ.

'ಮಾತೃಕಾಗಣ'ದ ಪ್ರಸ್ತಾಪವು ಶಿವ–ಶಕ್ತಿಯರ ಸಂಯೋಗವೇ ಕೇಂದ್ರೋದ್ದೇಶವಾಗುಳ್ಳ 'ಶ್ರೀಚಕ್ರ' ಸ್ಥಾಪನೆಯ ವಿಧಾನದಲ್ಲಿ ಅಡಕವಾಗಿದೆ. ಇಲ್ಲಿ ಬರುವ 'ತ್ರೈಲೋಕ್ಯ ಮೋಹನ'ವೆಂಬ ಆವರಣವನ್ನು ನಾಲ್ಕು ದ್ವಾರಗಳಾಗಿ, ನಾಲ್ಕು ಮೂಲೆಗಳಾಗಿ ವಿಂಗಡಿಸಿರುತ್ತಾರೆ. ಈ ಮೇಲೆ ತಿಳಿಸಿರುವ ಏಳು ಮಾತೃಕೆಯರೊಂದಿಗೆ ಲಕ್ಷ್ಮಿಯನ್ನು ಸೇರಿಸಿ ಈ ಚಕ್ರದಲ್ಲಿ ಪ್ರತಿಷ್ಠಾಪಿಸಲಾಗುತ್ತದೆ. ಇವರುಗಳು ಕೆರಳಿಕೆ (ಬ್ರಾಹ್ಮಿ,) ಪ್ರಚಂಡವಾದ ಸಿಟ್ಟು, (ಮಾಹೇಶ್ವರಿ,) ತಣಿಸಲಾಗದ ಆತ್ಯಾಸೆ (ಕೌಮಾರಿ,) ಕಣ್ಣುಕೋರೈಸುವ ಮೋಹ (ವೈಷ್ಣವಿ) ವಕ್ರವಾದ ಮೊಂಡುತನ (ವಾರಾಹಿ), ಪೀಡಿಸುವ ಈರ್ಷ್ಯೆ (ಇಂದ್ರಾಣಿ,) ಪಾತಕಾಂತರ ಮನೋಭಾವ (ಚಾಮುಂಡಿ) ಗಳಿಂದ ಕೂಡಿದವರಾಗಿದ್ದಾರೆ. ಇವರುಗಳ ಈ ಪ್ರಭಾವವನ್ನು ಸೌಮ್ಯಗೊಳಿಸುವುದಕ್ಕೆ ಇವರ ಆರಾಧನೆಯಿಂದ ಮಾತ್ರ ಸಾಧ್ಯವೆಂಬುದನ್ನು ಮನಗಂಡಿದ್ದಾರೆ. ಐತಿಹಾಸಿಕವಾಗಿ, ದಕ್ಷಿಣದ ಪೀಠಭೂಮಿಯನ್ನು ಕ್ರಿ. ಶ. 6 ರಿಂದ 8 ನೇ ಶತಮಾನದವರೆಗೆ ಆಳಿದ ಚಾಲುಕ್ಯ ರಾಜರು ಸಪ್ತಮಾತೃಕೆಯರಿಂದ ಪೋಷಿಸಲ್ಪಟ್ಟರೆಂದು ತಿಳಿಯುತ್ತದೆ. ಶೈವಧರ್ಮದ ಶಾಖೆಗೆ ಸೇರಿದ ಕಳಾಮುಖರಿಗೆ 'ಶಕ್ತಿ' ಪದಾಂತ ನಾಮಧೇಯವಿದ್ದಂತೆ ಗೊತ್ತಾಗುತ್ತದೆ. ಚಾಲುಕ್ಯ ಚೋಳ, ಗಂಗ – ಹೊಯ್ಸಳ, ರಾಜರ ಆಶ್ರಯವನ್ನು



ಮಾಹೇಶ್ವರೀ

ಶ್ರೀ ಕೆ. ಆರ್. ನರಸಿಂಹ

## ಸಪ್ತಮಾತೃಕಾ ದೇವತಾ ಲಕ್ಷಣಗಳು

### ಬ್ರಾಹ್ಮೀ :

ತತ್ರ ಬ್ರಾಹ್ಮೀ ಚತುರ್ವಕ್ತ್ರಾ ಷಡ್ಭುಜಾ ಹಂಸ ಸಂಸ್ಥಿತಾ
ಪಿಂಗಾಭಾ ಭೂಷಣೋಪೇತಾ ಮೃಗಚರ್ಮೋತ್ತರೀಯಕಾ
ವರಂ ಸೂತ್ರಂ ಸ್ರುವಂ ಧತ್ತೇ ದಕ್ಷಬಾಹುತ್ರಯೇ ಕ್ರಮಾತ್
ವಾಮೇತು ಪುಸ್ತಕಂ ಕುಂಡಿಂ ಬಿಭ್ರತಿ ಚಾಭಯಂ ಕರವ್

ಬ್ರಾಹ್ಮೀ ದೇವಿಯು ನಾಲ್ಕು ಮುಖಗಳನ್ನು ಹೊಂದಿ ಆರು ಕೈಗಳನ್ನು ಹೊಂದಿದ್ದು, ಹಂಸವಾಹನೆಯಾಗಿದ್ದಾಳೆ, ಪಿಂಗಳವರ್ಣದವಳಾಗಿ ಜಿಂಕೆಯ ಚರ್ಮದ ಉಡಿಗೆಯನ್ನು ಹೊಂದಿದ್ದು, ಬಲಗೈಗಳಲ್ಲಿ ವರಮುದ್ರೆ, ಪಾಶ, ಸ್ರುವಗಳನ್ನು ಹಿಡಿದಿದ್ದು, ಎಡಗೈಗಳಲ್ಲಿ ಅಭಯಮುದ್ರೆ, ಪುಸ್ತಕ, ಕಮಂಡಲಗಳನ್ನು ಹೊಂದಿರುವಳು.

### ಮಾಹೇಶ್ವರೀ :

ಮಾಹೇಶ್ವರೀ ವೃಷಾರೂಢಾ ಪಂಚವಕ್ತ್ರಾ ತ್ರಿಲೋಚನಾ
ಶ್ವೇತವರ್ಣಾ ದಶಭುಜಾ ಚಂದ್ರರೇಖಾ ವಿಭೂಷಣಾ
ಖಡ್ಗಂ ವಜ್ರಂ ತ್ರಿಶೂಲಂ ಚ ಪರಶುಂ ಚಾಭಯಂ ವರವ್
ಪಾಶಂ ಘಂಟಾಂ ತಥಾ ನಾಗಂ ಅಂಕುಶಂ ಬಿಭ್ರತಿ ಕರೈಃ

ಮಾಹೇಶ್ವರಿಯು ವೃಷಭವನ್ನೇರಿದ ಮೂರುಕಣ್ಣುಗಳ ಐದುಮುಖಗಳನ್ನೂ ಹೊಂದಿದ್ದು ಹತ್ತುಕೈಗಳ, ಬಿಳಿಯ ಬಣ್ಣದವಳು, ಚಂದ್ರರೇಖೆಯ ಆಭರಣ ಹೊಂದಿರುವಳು. ಬಲಗೈಗಳಲ್ಲಿ ಅಭಯಮುದ್ರೆ, ಕೊಡಲಿ, ಶೂಲ, ವಜ್ರ, ಖಡ್ಗಗಳನ್ನೂ ಎಡಗೈಗಳಲ್ಲಿ ವರಮುದ್ರೆ, ಅಂಕುಶ, ನಾಗ, ಗಂಟೆ, ಪಾಶಗಳನ್ನು ಹೊಂದಿರುವಳು.

### ಕೌಮಾರೀ :

ಷಡಾನನಾ ತು ಕೌಮಾರೀ ಪಾಟಲಾಭಾ ಸುಶೀಲಕಾ
ರವಿಬಾಹುರ್ಮಯೂರಸ್ಥಾ ವರದಾ ಶಕ್ತಿ ಧಾರಣೀ
ಪತಾಕಾಂ ಬಿಭ್ರತಿ ದಂಡಂ ಪಾತ್ರಬಾಣಂ ಚ ದಕ್ಷಿಣೇ
ವಾಮೇ ಚಾಪ ಮಥೋ ಘಂಟಾಂ ಕಮಲಂ ಕುಕ್ಕುಟಂ ತಥಾ
ಪರಶುಂ ಬಿಭ್ರತಿ ಚೈವ ತದಧಸ್ತ್ವಭಯಾನ್ವಿತಾ

ಕೌಮಾರೀದೇವಿಯು ಆರು ಮುಖಗಳಿಂದ ಶ್ವೇತ ರಕ್ತ ಪಾಟಲ ಶರೀರದಿಂದ ಪ್ರಸನ್ನ ಮೂರ್ತಿಯಾಗಿ ಹನ್ನೆರಡು ಕೈಗಳಿಂದ ಮಯೂರ ವಾಹನಗಳಾಗಿರುವಳು. ಬಲ ಭಾಗದ ಕೈಗಳಲ್ಲಿ ವರದಮುದ್ರೆ ಶಕ್ತಿ, ಪತಾಕೆ, ದಂಡ, ಪಾತ್ರೆ, ಬಾಣ,ಗಳೂ ಎಡ ಭಾಗದ ಕೈಗಳಲ್ಲಿ ಅಭಯಮುದ್ರೆ, ಕೊಡಲಿ, ಕುಕ್ಕುಟ, ಕಮಲ, ಗಂಟೆ, ಬಿಲ್ಲು, ಗಳನ್ನು ಹೊಂದಿರುವರು.

### ವೈಷ್ಣವೀ :

ವೈಷ್ಣವೀ ತಾರ್ಕ್ಷ್ಯಗಾ ಶ್ಯಾಮಾ ಷಡ್ಭುಜಾ ವನಮಾಲಿನೀ
ವರದಾ ಗದಿನೀ ದಕ್ಷೇ ಬಿಭ್ರತಿ ಚ ಕರೇಂಬುಜವ್
ಶಂಖಚಕ್ರಾಭಯಾನ್ ವಾಮೇ ಸಾ ಚೇಯಂ ವಿಲಸದ್ಭುಜಾ

ವೈಷ್ಣವೀದೇವಿಯು ಆರು ಕೈಗಳನ್ನು ಹೊಂದಿ ಗರುಡವಾಹನಳಾಗಿ, ಶ್ಯಾಮಲ ಶರೀರ ವರ್ಣದವಳಾಗಿ ಮಾನವಮಾಲಾಭರಣ ಹೊಂದಿರುವಳು. ಬಲಗೈಗಳಲ್ಲಿ ವರದ ಮುದ್ರೆ, ಗದೆ, ಪದ್ಮಗಳನ್ನೂ, ಎಡಗೈಗಳಲ್ಲಿ ಅಭಯಮುದ್ರೆ ಚಕ್ರ ಶಂಖಗಳನ್ನೂ ಹೊಂದಿರುವಳು.

(16ನೇ ಪುಟ ನೋಡಿ)

ಹೊಂದಿದ್ದ ಇವರು ನೂರಾರು ದೇವಾಲಯಗಳ ವ್ಯವಹಾರದಲ್ಲಿ ಅಧಿಕಾರವುಳ್ಳರಾಗಿದ್ದರು, ಕೋಲಾರ, ಶಿವಮೊಗ್ಗ ಮುಂತಾದ ಜಿಲ್ಲೆಗಳ ಹಲವಾರು ಪ್ರದೇಶಗಳು, ಇವರ ಕೇಂದ್ರಸ್ಥಳಗಳಾಗಿದ್ದವು. ಹೀಗೆ ಪೌರಾಣಿಕ – ಐತಿಹಾಸಿಕ ಹಿನ್ನೆಲೆಯೊಂದನ್ನು ಸಪ್ತಮಾತೃಕೆಯರ ಆರಾಧನೆಯಲ್ಲಿ ಗುರುತಿಸಬಹುದು.

ಕೋಲಾರ ಜಿಲ್ಲೆಯಲ್ಲಿ ಸಪ್ತಮಾತೃಕೆಯರಿಗಾಗಿ ಕಟ್ಟಲಾಗಿರುವ ಪ್ರತ್ಯೇಕವಾದ ದೇವಾಲಯಗಳು ಹಲವಾರು ಇದ್ದು ಪ್ರಸಿದ್ಧಿಯನ್ನೂ ಪಡೆದಿರುವುದಾಗಿವೆ. ಇಂತಹವುಗಳಲ್ಲಿ ಕೋಲಾರ, ಹುನಗುಂದ, ನಂಗಲಿ ಮೊದಲಾದವು ವಿಶೇಷ ಮಹತ್ತ್ವವನ್ನೂ ಪಡೆದಿವೆ.

ಕೋಲಾರವು ಪೂರ್ವಗಂಗರ ಕಾಲದಿಂದಲೂ ಪ್ರಖ್ಯಾತವಾಗಿ ಚೋಳರ ಕಾಲದಲ್ಲಿ ತನ್ನ ವೈಭವನ್ನು ಮೆರೆಯಿತು. ಇಲ್ಲಿರುವ ಸಪ್ತಮಾತ್ರಕಾ ದೇವಾಲಯವನ್ನು ರಾಜೇಂದ್ರ ಚೋಳನು (ಆಳ್ವಿಕೆಯ ಕಾಲ 1012 – 1044 ರವರೆಗೆ) ಶಿಲಾಮಯವನ್ನಾಗಿ ಮಾಡಿಸಿದಂತೆ ತಿಳಿದುಬರುತ್ತದೆ. ಇದಕ್ಕೆ ಮೊದಲು ಇಲ್ಲಿದ್ದ ಕಟ್ಟಡವನ್ನು ಇಟ್ಟಿಗೆ ಗಾರೆಗಳಿಂದ ಕಟ್ಟಿದ್ದಿರಬಹುದು. ದೀರ್ಘ ಕಾಲದ ಉಳಿಯುವಿಕೆಗಾಗಿ ಇಂತಹುದೊಂದು ಕಟ್ಟಡ ಕಲ್ಲಿನಿಂದ ಕಟ್ಟಲ್ಪಟ್ಟು ನಮ್ಮವರೆಗೆ ಉಳಿಯಲು ಸಾಧ್ಯವಾಯಿತು.

ವಾಸ್ತುಶಿಲ್ಪದ ಪ್ರಕಾರ 'ಮಾತ್ರಕಾಗಣಗವನ್ನು' ಭದ್ರಾಸನದಲ್ಲಿ ಇರಿಸಲಾಗುತ್ತದೆ. ಇವರ ಕಾಲುಗಳನ್ನು ಒರಗಿದ ಭಂಗಿಯಲ್ಲಿಡಲಾಗುತ್ತದೆ. ಇವರು ನಾಲ್ಕು ತೋಳುಗಳನ್ನು ಮೂರು ಕಣ್ಣುಗಳನ್ನು ಹೊಂದಿದವರಾಗಿ ಎಲ್ಲ ಅಲಂಕಾರ ಸಾಮಾಗ್ರಿಗಳಿಂದಲೂ ಅಲಂಕೃತರಾಗಿರುತ್ತಾರೆ. ಕರಂಡ – ಕಿರೀಟ ರೀತಿಯ ಮಕುಟಗಳನ್ನು ಇವರಿಗೆ ಅಳವಡಿಸಿರುತ್ತಾರೆ. ಇವರ ವರ್ಣಗಳೂ ಸಹಾ ಕಪ್ಪು ಕೆಂಪು ಇತ್ಯಾದಿ ಅವರವರಿಗೆ ತಕ್ಕಂತೆ ಪ್ರತ್ಯೇಕವಾಗಿರುತ್ತವೆ. ಬ್ರಾಹ್ಮಿಯು ನಾಲ್ಕು ತಲೆಗಳನ್ನು ಹೊಂದಿದ್ದರೆ, ವಾರಾಹಿಯ ತಲೆಯು ವರಾಹಾಕಾರವನ್ನು ಹೋಲುತ್ತಿರುತ್ತದೆ. ಅವತಾರ ಕಲ್ಪನೆಯೂ ಸಹಾ ವಾರಾಹಿಯ ಹಿನ್ನೆಲೆಯಲ್ಲಿದೆ. ಈಕೆ ವರಾಹನೊಂದಿಗೆ ಸೇರಿಕೊಂಡು ಬಂದಿರುವ ಶಿಲ್ಪಗಳು ತುಂಬಾ ಅಪರೂಪ. ಮಾತ್ರ, ಗುಣದಲ್ಲಿ ಸೇರಿ ಹೋಗಿ ತಾಂತ್ರಿಕ ವಿಧಾನದಲ್ಲಿ ನೆಲೆಹೊಂದಿದವಳಾದಳು.

ಚಾಮುಂಡೇಶ್ವರಿಯು ಇವರಲ್ಲೆಲ್ಲ ವಿಶೇಷ ಸ್ಥಾನವನ್ನು ಪಡೆದವಳು. ಈಕೆಯ ಪ್ರತಿಷ್ಠೆ – ಪೂಜೆಗಳಲ್ಲಿಯೂ ಸಹಾ ಪ್ರತ್ಯೇಕತೆಯು ತುಂಬಿಕೊಂಡು ಬಂದಿರುತ್ತದೆ. ಕೋಲಾರದಲ್ಲಿನ ಈಕೆಯ



ವೈಷ್ಣವೀ

ದೇವಾಲಯವು (ಕೋಲಾರಮ್ಮನೆಂದು ಈಕೆಗೆ ಮತ್ತೊಂದು ಹೆಸರು) ಎರಡು ಗರ್ಭಗೃಹಗಳನ್ನೂ ಹೊಂದಿರುವುದೊಂದು ವಿಶೇಷ. ಈ ಎರಡು ಗೃಹಗಳಲ್ಲೂ ಗಾರೆಯಿಂದ ಮಾಡಿದ, ಶಿಲೆಯಿಂದ ಮಾಡಲಾಗಿರುವ ವಿಗ್ರಹಗಳಿವೆ. (ಈ ಸ್ಥಳದಲ್ಲಿದ್ದ ಮತ್ತೊಂದು ಈ ಗುಂಪಿನ ಮೂರ್ತಿಗಳನ್ನು ಅಂತರಗಂಗೆಯ ಬೆಟ್ಟಗಳಲ್ಲಿರುವ ಶೇರು ಹಳ್ಳಿಯಲ್ಲಿ ಪ್ರತಿಷ್ಠೆ ಮಾಡಲಾಗಿದೆಯೆಂದು ಹೇಳಲಾಗುತ್ತದೆ) ಗಾರೆಯ ವಿಗ್ರಹಗಳನ್ನು ಮಾಡುವ ಪದ್ಧತಿಯು ಪಲ್ಲವರ ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಹೀಗಾಗಿ ಈ ಭಾಗವು ಪಲ್ಲವರ ಕಾಲದಿಂದಲೇ ಉಳಿದಿರಬೇಕೆಂಬ ಸಂದೇಹವಿದೆ. ಕೋಲಾರದ ದೇವಾಲಯದಲ್ಲಿ ಉತ್ತರದ ಕಡೆಗಿರುವ ಗರ್ಭಗೃಹದಲ್ಲಿರುವ ಸಪ್ತಮಾತೃಕೆಯರಲ್ಲಿ ಚಾಮುಂಡಿಯ ವಿಗ್ರಹ – ಗಾರೆಯದು – ಪೂರ್ವಾಭಿಮುಖವಾಗಿದ್ದರೆ, ಪಶ್ಚಿಮದ ಕಡೆಗಿರುವ ಗರ್ಭಗೃಹದಲ್ಲಿರುವ ಚಾಮುಂಡಿಯ ವಿಗ್ರಹವನ್ನು, ದಕ್ಷಿಣಾಭಿಮುಖವಾಗಿ–ಕಲ್ಲಿನದು–ಪ್ರತಿಷ್ಠೆ ಮಾಡಲಾಗಿದೆ. (ಎರಡನೆಯ ಪದ್ಧತಿಯೇ ಅನೇಕ ದೇವಾಲಯಗಳಲ್ಲಿ ಮುಂದುವರೆದುಕೊಂಡು ಬಂದಿರುತ್ತೆ) 'ಪೀಡಾರಿಯಾರ್' (ತಮಿಳಿನ ಹೆಸರು) ಎಂಬ ಹೆಸರಿನಿಂದಲೂ ಕರೆಯುವ ಕೋಲಾರಮ್ಮನ ಪೂಜೆಯು ಕುತೂಹಲವನ್ನು ಹುಟ್ಟಿಸುವುದರ ಜೊತೆಗೆ ಭೀತಿಯನ್ನೂ ಉಂಟು ಮಾಡುವುದಾಗಿದೆ. ಈಕೆಯ ಆಕಾರವೂ ಸಹಾ ತಲ್ಲಣಗೊಳಿಸುವಂತಿದೆ. ಕುಳಿತುಕೊಂಡು ಕಾದಾಡುವಂತೆ ಕಾಣುತ್ತಿರುವ ವಿಗ್ರಹವು ಅತಿ ಉಗ್ರವಾಗಿದೆ. ತನ್ನ ಕೈಗಳಲ್ಲಿ ಬೇರೆ ಬೇರೆ ಆಯುಧಗಳನ್ನು (ಹಿಡಿಗತ್ತಿ, ಡಮರು, ಕತ್ತಿ, ನೃತ್ಯ ಮುದ್ರೆ, ಗುರಾಣಿ, ಸರ್ಪ, ಕಪಾಲ ಇತ್ಯಾದಿ) ಹಿಡಿದಿರುವ ಈಕೆಯನ್ನು ನೇರವಾಗಿ ನೋಡಿದಾಗ ಪ್ರಳಯ ನೃತ್ಯವನ್ನು ಮಾಡುತ್ತಿರುವಂತೆ ಭಾಸವಾಗುತ್ತದೆ. ತಲೆಬುರುಡೆಗಳ ಮಾಲೆ, ಜಟಾಮುಕುಟ, ಕೋರೆದಾಡೆಗಳು ಭೀಕರತೆಯ ಪ್ರದರ್ಶನ ಮಾಡುವಂತಿದ್ದರೆ ಸುತ್ತಲೂ ಇರುವ ಪ್ರಭಾವಳಿಯು ಸೌಂದರ್ಯದ ಸಾಧನವಾಗಿದೆ.



ವಾರಾಹೀ

ತಾಂತ್ರಿಕ ಸಾಧನೆಯಲ್ಲಿ ಬಲಿಕೊಡುವ ಪದ್ಧತಿಗೆ ಹೆಚ್ಚಿನ ಮನ್ನಣೆಯಿದೆ. ಈ ಕಾರ್ಯಕ್ಕಾಗಿಯೇ ವಿಶೇಷ ಬಲಿಪೀಠಗಳನ್ನು ದೇವಾಲಯಗಳಲ್ಲಿ ರಚಿಸಿರುವುದನ್ನು ಕಾಣಬಹುದು. ಯೋಗಿನಿ–ಯೋಗೇಶ್ವರರ ಪೂಜೆ, ಕನ್ಯಾಪೂಜೆ, ಅಂಗಾರ ಬಲಿಗಳು ಈ ಪದ್ಧತಿಯ ಅಂಗಗಳಾಗಿದ್ದಂತೆ ತಿಳಿದು ಬರುತ್ತದೆ. ವರ್ಷದಲ್ಲಿ ಮೂರುಸಲ, ವಿಶೇಷವಾಗಿ, ಮಂಗಳವಾರಗಳಂದು ಸಾಮಾನ್ಯವಾಗಿ ಈ ರೀತಿಯ ಪೂಜಾವಿಧಾನಗಳು ಇಲ್ಲಿ ನೆರವೇರುತ್ತಿತ್ತು. ಬಲಿ ಕೊಡಲು ಸಾಮಾನ್ಯವಾಗಿ ಕುರಿಯನ್ನೇ ಆರಿಸಲಾಗುತ್ತಿತ್ತು.

ಬಲಿಯ ಜೊತೆಗೆ ಮದ್ಯವನ್ನೂ ಅರ್ಪಿಸಲಾಗುತ್ತಿತ್ತು. ಯೋಗಿನೀ – ಯೋಗೇಶ್ವರರ ಪೂಜೆಯಲ್ಲಿ ಈ ಮದ್ಯದ ನೈವೇದ್ಯ ಸೇವನೆಗಳು ನಡೆಯುತ್ತಿದ್ದಿರಬೇಕು. ಸುರಾಪಾನ ಆರೋಗ್ಯಕ್ಕೆ ಹಾನಿಕರವೇನೋ ನಿಜ. ಆದರೆ ತಾಂತ್ರಿಕಾರಾಧನೆಯಲ್ಲಿ ಇದಿಲ್ಲದೆ ವಿಧಿ ಪೂರೈಸುವುದಿಲ್ಲ.

ಕನ್ಯಾಪೂಜೆಯೊಂದು ವಿಶೇಷವಾದ ಪದ್ಧತಿ. ಇದಕ್ಕಾಗಿಯೇ ನಿಗದಿತವಾದ ಕನ್ಯೆಯೊಬ್ಬಳ ಉಡುಗೆ – ತೊಡುಗೆಗಳಿಗೆ ದ್ರವ್ಯವನ್ನು ವಿಧಿಸಲಾಗಿರುವ ವಿವರಣೆ ಕೋಲಾರಮ್ಮನ ದೇವಾಲಯದ



ಐಂದ್ರೀ

ಬರಹದಲ್ಲಿದೆ. ಕೆಲವು ಕನ್ಯೆಯರನ್ನೂ ಸಹಾ ಈ ಕಾರ್ಯದಲ್ಲಿ ನಿಯೋಜಿಸಲಾಗಿದೆ. ಚಾಮುಂಡ ಹೋಮವು ಪ್ರತಿನಿತ್ಯವೂ ಕಡ್ಡಾಯವಾಗಿ ನಡೆಯಬೇಕಿತ್ತು. ಈ ಸಂದರ್ಭದಲ್ಲಿ ನವದೇವತೆಗಳಿಗೆ ಅನ್ನದ ನೈವೇದ್ಯ ನೀಡಲಾಗುತ್ತಿತ್ತು. ವಿಶೇಷ ಹಬ್ಬದ ದಿನಗಳಲ್ಲಿ ದೇವಿಯ ಮಂಗಳಸ್ನಾನವನ್ನೂ, ಆ ಸಂದರ್ಭಗಳಲ್ಲಿ ಔಷಧದ್ರವ್ಯಗಳಿಗೆ ಆಗತ್ಯವಾದ ವೆಚ್ಚವನ್ನೂ ಇಲ್ಲಿ ನಮೂದಿಸಲಾಗಿದೆ. ಧ್ವಜಾರೋಹಣ, ಅವರೋಹಣಗಳ ಸಂದರ್ಭಗಳಲ್ಲಿ ಕೊಡಬೇಕಾದ ಬಲಿಯನ್ನು ತಿಳಿಸಲಾಗಿದೆ.

ಕೋಲಾರವು ಇಂತಹ ತಾಂತ್ರಿಕ ಸಂಪ್ರದಾಯವೊಂದರ ಆರಾಧನೆಯ ಆಗರವಾಗಿದ್ದು ಪರಂಪರೆಯನ್ನು ನಾಡಿನ ಮೂಲೆಗಳಲ್ಲಿ ಪ್ರಸರಿಸಿರುವುದರ ಬಗ್ಗೆ ಈ ಜಿಲ್ಲೆಯ ಇನ್ನೂ ಕೆಲವು



ಚಾಮುಂಡೀ

(14 ನೇ ಪುಟದಿಂದ)

### ವಾರಾಹೀ :

ಕೃಷ್ಣ ವರ್ಣಾ ತು ವಾರಾಹೀ ಮಹಿಷಸ್ಥಾ ಮಹೋದರೀ
ವರದಾ ದಂಡಿನೀ ಖಡ್ಗಂ ಬಿಭ್ರತಿ ದಕ್ಷಿಣ ಕರೇ
ಖೇಟ ಪಾತ್ರಾಭಯಾನ್ ವಾಮೇ ಸೂಕರಸ್ಯಾಲಸದ್ಭುಜಾ

ವಾರಾಹೀ ದೇವಿಯು ಕಪ್ಪಾದ ದೇಹದಿಂದ ವರಾಹ ಮುಖಹೊಂದಿ, ಮಹಿಷ ವಾಹನಳಾಗಿ ದೊಡ್ಡ ಹೊಟ್ಟೆಯೊಂದಿಗೆ ಆರು ಕೈಗಳನ್ನು ಹೊಂದಿರುವಳು. ಬಲ ಗೈಗಳಲ್ಲಿ ವರದ ಮುದ್ರೆ, ಖಡ್ಗ, ದಂಡಗಳೂ, ಎಡಕೈಗಳಲ್ಲಿ ಅಭಯಮುದ್ರೆ, ಖೇಟ, ಪಾತ್ರೆಗಳನ್ನೂ ಧರಿಸಿದ್ದಾಳೆ.

### ಐಂದ್ರೀ :

ಐಂದ್ರೀ ಸಹಸ್ರ ದೃಕ್ ಸೌಮ್ಯಾ ಹೇಮಾಭಾ ಗಜಸಂಸ್ಥಿತಾ
ವರದಾ ಸೂತ್ರಿಣೀ ವಜ್ರಂ ಬಿಭ್ರತ್ಯೂರ್ಧ್ವಂ ತು ದಕ್ಷಿಣೇ
ವಾಮೇತು ಕಮಲಂ ಪಾತ್ರಂ ಹ್ಯಭಯಂ ತದಧಃಕರೇ

ಐಂದ್ರಿ ದೇವಿಯು ಸೌಮ್ಯಳು. ಸಹಸ್ರ ನಯನಗಳಿಂದಲೂ, ಬಂಗಾರದ ದೇಹ ಛಾಯೆಯಿಂದಲೂ, ಆನೆಯನ್ನು ವಾಹನವನ್ನಾಗಿ ಹೊಂದಿ, ಆರು ಕೈಗಳನ್ನು ಹೊಂದಿರುವಳು. ಬಲಭಾಗದ ಕೈಗಳಲ್ಲಿ ವರದಮುದ್ರೆ, ಸೂತ್ರ, ವಜ್ರಗಳೂ ಎಡಕೈಗಳಲ್ಲಿ ಅಭಯಮುದ್ರೆ, ಪಾತ್ರೆ, ಪದ್ಮಗಳನ್ನೂ ಹೊಂದಿರುವಳು.

### ಚಾಮುಂಡೀ :

ಚಾಮುಂಡಾ ಪ್ರೇತಗಾ ಕೃಷ್ಣಾ ವಿಕೃತಾ ಚಾಹಿಭೂಷಣಾ
ದ್ರಂಷ್ಟ್ರಾಲಾಕ್ಷೀಣ ದೇಹಾ ಚ ಗರ್ತಾಕ್ಷೀ ಕಾಮರೂಪಿಣೀ
ದಿಗ್ಬಾಹುಃ ಕಾಮಕುಕ್ಷಿ ಚ ಮುಸಲಂ ಚಕ್ರಚಾಮರೇ
ಅಂಕುಶಂ ಬಿಭ್ರತಿ ಖಡ್ಗಂ ದಕ್ಷಿಣೇ ಚಾಥ ವಾಮಕೇ
ಖೇಟಂ ಪಾಶಂ ಧನುರ್ದಂಡಂ ಕುಠಾರಂ ಚಾಪಿ ಬಿಭ್ರತೀ

ಚಾಮುಂಡಿಯು ಪ್ರೇತಗಳಿಂದ ಆವೃತಳಾಗಿ ಕಪ್ಪಾಗಿ ವಿಕೃತಳಾಗಿರುವಳು. ಸರ್ಪಗಳನ್ನು ಭೂಷಣಗಳನ್ನಾಗಿ ಹೊಂದಿ, ಕೋರೆ ದಾಡೆಗಳಿಂದ ಕೂಡಿದ್ದು ಭಾರೀ ದೇಹವನ್ನು ಹೊಂದಿರುವಳು. ಆಳವಾದ ಕಣ್ಣುಗಳು ಕಿರಿದಾದ ಹೊಟ್ಟೆಯುವಳು. ಈಕೆ ಕಾಮರೂಪಿಣಿಯೂ ಹೌದು. ಬಲಕೈಗಳಲ್ಲಿ ಖಡ್ಗ ಅಂಕುಶ, ಒನಕೆ, ಚಕ್ರ, ಚಾಮರ, ಎಡಗೈಗಳಲ್ಲಿ ಖೇಟ, ಪಾಶ, ದಂಡ, ಕೊಡಲಿ, ಬಿಲ್ಲುಗಳನ್ನು ಧರಿಸಿದ್ದಾಳೆ.

ಕಡೆ ನಿಂತಿರುವ 'ಸಪ್ತಮಾತೃಕಾ' ದೇವಾಲಯಗಳು ತಿಳಿಸುವ ವಿಷಯಗಳನ್ನು ನೀಡುತ್ತವೆ. ಇಲ್ಲಿ ದೊರೆತಿರುವಂತಹ ಚಾರಿತ್ರಿಕ ದಾಖಲೆಯು ಬೇರೆಡೆಗಳಲ್ಲಿ ದೊರೆಯುವುದಿಲ್ಲವಾದರೂ ಪಟ್ಟವಾಗಿದ್ದ ಈ ಪದ್ಧತಿ ಇದ್ದಿರಬೇಕೆಂಬುದಕ್ಕೆ ವಿಗ್ರಹಗಳ ಇರುವಿಕೆಯೇ ಸಾಕ್ಷಿಯಾಗಿದೆ. ಹುನಗುಂದ ಅಥವಾ 'ಪೊನ್‌ಕುನ್ದಂ' (ತಮಿಳಿನ ಹೆಸರು) ಎಂಬ ಗ್ರಾಮವು ಕೋಲಾರದಿಂದ ನೈರುತ್ಯದಿಕ್ಕಿನಲ್ಲಿ, ಬೇತಮಂಗಲಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು 9–10 ಮೈಲಿಗಳ ಅಂತರದಲ್ಲಿದ್ದು ಪ್ರಾಗೈತಿಹಾಸಿಕ ಮಹತ್ತ್ವವನ್ನು ಸಾರುವ ಪ್ರದೇಶವಾಗಿದೆ. ಹೆಸರಿನಿಂದಲೂ ಇದು ಚಿನ್ನದ ಬೆಟ್ಟ ಎಂಬರ್ಥವನ್ನು ಕೊಡುವಂತೆ, ಸೃಷ್ಟಿಯಿಂದಲೂ ಹತ್ತಿರದಲ್ಲಿರುವ ಕೋಲಾರ ಚಿನ್ನದ ಗಣಿಗಳಿಗೆ ಸಂಬಂಧವನ್ನು ಸಾರುವಂತೆ ಅಪರೂಪ ಶಿಲಾ ರಚನೆಗಳಿಂದ ನಿಂತಿರುವ ಪ್ರದೇಶವಾಗಿದೆ.

ಹುನಗುಂದದಲ್ಲಿ ಸಪ್ತಮಾತೃಕೆಯರ ದೇವಾಲಯವಿದ್ದು ಇದರ ರಚನೆ ಪಾಳೆಯಗಾರಿಕೆಯ ಕಾಲಕ್ಕೆ ಹೋಲುತ್ತದೆ. ಆದರೆ ಇಲ್ಲಿನ ವಿಗ್ರಹಗಳು ಚೋಳರ ಕಾಲದಿಂದಲೂ ಪ್ರಸಿದ್ಧವಾಗಿರಬೇಕು. ವೀಣಾಧಾರಿ ವೀರಭದ್ರನಿಂದ ಮೊದಲಾಗಿ ಇಲ್ಲಿರುವ ಬ್ರಾಹ್ಮಿ ಮಾಹೇಶ್ವರಿ ಮುಂತಾದ ಶಕ್ತಿ ವಿಗ್ರಹಗಳಲ್ಲಿ ಚಾಮುಂಡಿಯು ಪ್ರಧಾನವಾಗಿ ಅರ್ಚಿಸಲ್ಪಡುತ್ತಿದ್ದಿರಬೇಕು. ಈ ವಿಗ್ರಹದ ರಚನೆಯು ಸಾಮಾನ್ಯವಾಗಿ ಕೋಲಾರದ ಕೋಲಾಹಲಮ್ಮನನ್ನೇ ಹೋಲುವಂತಿದ್ದು, ತಲೆಯ ಹಿಂಭಾಗದಿಂದ ಜ್ವಾಲೆಗಳು ಹೊರಸೂವಂತೆ ಕಾಣುತ್ತದೆ. ಒಟ್ಟು ಶಿಲ್ಪದಲ್ಲಿ ರಭಸ ತುಂಬಿದೆ. ಕೋಲಾರದ ಸಪ್ತಮಾತೃಕೆಯರನ್ನು ಸ್ಥಾಪಿಸಿದ ಕಾಲಕ್ಕೆ ಸ್ವಲ್ಪ ಹಿಂದು– ಮುಂದು ಈ ವಿಗ್ರಹಗಳ ಸ್ಥಾಪನೆಯೂ ನಡೆದಿರಬೇಕು. ಆದರೆ ಇಂದು ಈ ದೇವಾಲಯವು ಬೆಳಕು ಬಾಗಿಲುಗಳಿಂದ ವಂಚಿತವಾಗಿ, ರಕ್ಷಣೆಯ ನೆರವಿಗಾಗಿ ನಿಂತಿದೆ. ಹುನಗುಂದದ ಸುತ್ತಮುತ್ತಲಿನ ಪರಿಸರವು ಶಾಕ್ತಾರಾಧನೆಗೆ ಪುಟಕೊಟ್ಟಂತಿದ್ದು ಮತ್ತಷ್ಟು ವಿವರವಾದ ಅಧ್ಯಯನಕ್ಕೆ ಎಡೆ ಮಾಡಿ ಕೊಡಬಹುದಾದ ಸ್ಥಳವಾಗಿದೆ.

ಕರ್ನಾಟಕ – ಆಂಧ್ರ ಗಡಿಯಲ್ಲಿರುವ ನಂಗಲಿ ಗ್ರಾಮವು ಚಾರಿತ್ರಿಕ ಅಧ್ಯಯನದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಇಲ್ಲಿರುವ 'ಸಪ್ತಮಾತೃಕಾ' ದೇವಾಲಯವು ಹೊಳೆಯೊಂದರ ಪಕ್ಕದಲ್ಲಿದ್ದು ಕುಸಿದು ಬೀಳುವ ದುಃಸ್ಥಿತಿಯಲ್ಲಿದೆ. ದೇವಾಲಯದ ಮುಂದಿನ ಉಯ್ಯಾಲೆ ಕಂಭಗಳು ಉಳಿದಿವೆಯಾದರೂ ಒಳಗಡೆಯಲ್ಲಿರುವ ವಿಗ್ರಹಗಳು ಕೈಕಾಲು ಮುರಿದು ಮುಖ ಜಜ್ಜಿಹೋಗಿ ಭಿನ್ನವಾಗಿದೆ. ಈ ವಿಗ್ರಹಗಳಲ್ಲಿರುವ ಖಚಿತತೆ, ಅಲಂಕಾರ ಸಾಧನಗಳನ್ನು ಬಿಡಿಸಿರುವ ರೀತಿ– ಇವುಗಳನ್ನು ಗಮನಿಸಿದಾಗ ನಿರಾಸೆಯಾಗುವಂಥದೇನೂ ಇಲ್ಲ.

ಸಂಪತ್ತು ಅಳಿಯಬಹುದು, ಉಳಿಯಬಹುದು; ರಾಜ್ಯನಾಶವಾಬಹುದು, ಕೋಶ ಬರಿದಾಗಬಹುದು; ಆದರೆ ಮಾನವನ ಶ್ರದ್ಧೆ – ನಂಬಿಕೆಗಳ 'ಮೂಲದ್ರವ್ಯವು' ಎಂದೂ ಬರಿದಾಗಿಲ್ಲ. ಇಂತಹ ಮೂಲಸ್ರೋತದಿಂದ ಹರಿಯುತ್ತಿರುವ ಪೂಜಾ ವಾಹಿನಿಯು ಅನಂತಕಾಲದ ಪರಿಧಿಯಲ್ಲಿ ಹಬ್ಬ– ಹರಿದಿನಗಳಾಗಿ, ಜಾತ್ರೆ – ಉತ್ಸವಗಳಾಗಿ ಹರಿಣಮಿಸುತ್ತಿದೆ. ತನಗೆ ಒದಗಿ ಬರುವ ಸೋಲು – ನೋವುಗಳ ನಿವಾರಣೆಗಾಗಿ, ಗೆಲುವಿನ ಆಕಾಂಕ್ಷೆಗಾಗಿ ಮಾನವ ಉದ್ದಕ್ಕೂ ಪ್ರಾರ್ಥನೆಯನ್ನು ಸಲ್ಲಿಸಿಕೊಂಡು ಬಂದಿದ್ದಾನೆ. ಇದಕ್ಕಾಗಿ ತನ್ನೆದುರಿಗೆ ನಿಲ್ಲಿಸಿಕೊಂಡ ಪ್ರತೀಕಗಳು ಹಲವಾರು. ಇಂತಹ ಸಾಲಿನಲ್ಲಿ ಸೇರುವ 'ಸಪ್ತಮಾತೃಕೆ'ಯರಿಗೆ ಭಾರತೀಯ ಮೂರ್ತಿಶಿಲ್ಪಶಾಸ್ತ್ರದಲ್ಲಿ ಪ್ರತ್ಯೇಕ ಅಧ್ಯಾಯವೊಂದು ಉಳಿದಿದೆ.

—

# ವೈದೇಹೀ ಸಹಿತಂ

ಶ್ರೀ ಎಸ್. ನರಸಿಂಹಾಚಾರ್ಯ

ವೈದೇಹೀ ಸಹಿತಂ ಸುರದ್ರುಮತಲೇ
ಹೈಮೇ ಮಹಾಮಂಟಪೇ
ಮಧ್ಯೇ ಪುಷ್ಪಕಮಾಸನೇ ಮಣಿಮಯೇ
ವೀರಾಸನೇ ಸುಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ
ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ
ರಾಮಂ ಭಜೇ ಶ್ಯಾಮಲಮ್ ॥

ಶ್ರೀರಾಮ ನಿತ್ಯರಾಮ. ದಶರಥ ಪುತ್ರನಾದ ಮೇಲೆ ಮಾತ್ರ ಅವನಿಗೆ ರಾಮನೆಂಬ ನಾಮ ಉಂಟಾಗಲಿಲ್ಲ. ಶ್ರೀ ವಿಷ್ಣುವಿನ ಅನಂತಕೋಟಿ ನಾಮಗಳಲ್ಲಿ ಶ್ರೀರಾಮನೆಂಬುದೂ ಒಂದು- ಈ ಹೆಸರನ್ನು ದಶರಥನ ಜ್ಯೇಷ್ಠ ಕುಮಾರನಿಗೆ ಇಟ್ಟರು. ಅವನು ಶ್ರೀವಿಷ್ಣುವೂ ಹೌದು, ನೀಲ ಮೇಘಶ್ಯಾಮನೂ ಹೌದು, ಅರವಿಂದದಳಾಯ ತಾಕ್ಷನೂ ಹೌದು. ಆದ್ದರಿಂದ ರಾಮನೆಂಬ ಹೆಸರು ದಶರಥರಾಮನಿಗೆ ಅನ್ವರ್ಥವಾಯಿತು.

ಈ ರಾಮನು ಸದಾ ವೈದೇಹೀಸಹಿತನಾದವನು, ಅಜನಾದ ರಾಮನಿಗೆ ಅಜಳೂ ಸಹಧರ್ಮಚಾರಿಣಿಯೂ ಆದವಳು ವೈದೇಹಿ. ಅವಳು ಭಗವಂತನ ನಿತ್ಯ ಕೈಂಕರ್ಯಗಳನ್ನು ವೈವಿಧ್ಯಮಯವಾಗಿ ಶ್ರೀವೈಕುಂಠದಲ್ಲಿ ಮಾಡುವವಳೂ ಆಗಿ, ಇತರ ನಿತ್ಯಮುಕ್ತರುಗಳಿಂದ ಮಾಡಿಸುತ್ತಲೂ ಇರುವವಳಾಗಿ, ಅವಳು ಸಂದರ್ಭಕ್ಕೆ ತಕ್ಕಂತೆ ವಿಶೇಷವಾದ ವಿಧವಿಧವಾದ ದೇಹರೂಪವನ್ನು ಸ್ವಸಂಕಲ್ಪದಿಂದಲೂ, ಶ್ರೀಹರಿಯ ಇಚ್ಛಾನುಸಾರಿಯಾಗಿಯೂ ಹೊಂದುತ್ತಾ, ಅವನ ಜೊತೆಯಲ್ಲಿ ಅಪಿನಾಭೂತಳಾಗಿ ನಿತ್ಯ ಸಹಚರ್ಯಯೋಗ ಹೊಂದಿ, ನಿತ್ಯ ವಿಭೂತಿ ಲೀಲಾವಿಭೂತಿಗಳೆರಡರಲ್ಲಿಯೂ ತನ್ನ ಭ್ರೂಭಂಗಾದಿಗಳಿಂದಲೂ ಪತಿಯ ಅನ್ಯೋನ್ಯ ಕಟಾಕ್ಷ ವೀಕ್ಷಣಾದಿ ಇಂಗಿತಗಳಿಂದಲೂ ಅಖಿಲಾಂಡಕೋಟಿಬ್ರಹ್ಮಾಂಡವನ್ನು ತನ್ನ ಪತಿಯ ಸಂಗಡ ನಿರ್ವಹಿಸುತ್ತಿರುವಳು. ಆದ್ದರಿಂದಲೇನೇ ಶ್ರೀವಿಷ್ಣುವು ನಿತ್ಯವಿಭೂತಿಯಲ್ಲೂ "ವೈದೇಹೀಸಹಿತ" ಮತ್ತು ವಿಭವಾವತಾರವಾದ ರಾಮಾವತಾರದಲ್ಲಿಯೂ ವಿದರ್ಭಾಧಿಪತಿಯ ಮಗಳನ್ನು ಮದುವೆಯಾಗಿ ಏಕ ಪತ್ನೀವ್ರತಸ್ಥನಾಗಿ "ವೈದೇಹೀಸಹಿತ"ನಾದ.

ಶ್ರೀರಾಮನು 'ವಿರಾಸನೇ ಸುಸ್ಥಿತ'ನು. ವೀರಾಸನವನ್ನು ವರ್ಣಿಸುವಾಗ ಅಷ್ಟಾಕ್ಷರೀಮಂತ್ರದ ಧ್ಯಾನಶ್ಲೋಕ ನೆನಪಿಗೆ ಬರುತ್ತದೆ. ಅದರಲ್ಲಿ ಶ್ರೀಮನ್ನಾರಾಯಣನು ಶ್ರೀ ವೈಕುಂಠದಲ್ಲಿ ಕುಳಿತಿರುವ ಭಂಗಿ ವರ್ಣಿತವಾಗಿದೆ. "ಸವ್ಯಂಪಾದಂ ಪ್ರಸಾರ್ಯ, ಶ್ರುತಿ ದುರಿತಹರಂ ದಕ್ಷಿಣಂಕುಚಯಿತ್ವಾ, ಜಾನುನ್ಯಾದಾಯ, ಸವ್ಯೇತರ ಭುಜಂ ನಾಗಭೋಗೇನಿಧಾಯ." ಇದು ಪರಮಪುರುಷನು ಪರಮವ್ಯೋಮದಲ್ಲಿ ತನ್ನ ಮಣಿಮಯ ಮಂಟಪದಲ್ಲಿ ವಿರಾಜಿಸುತ್ತಿರುವ ಠೀವಿ. ಎಡಪಾದವನ್ನು ನೀಳವಾಗಿಟ್ಟು, ದಕ್ಷಿಣಪಾದವನ್ನು ಮೇಲಕ್ಕೆ ಎಳೆದುಕೊಂಡು, ಮಂಡಿಯ ಬಳಿ ಬಗ್ಗಿಸಿದ್ದಾನೆ. ದಕ್ಷಿಣ ಪಾದಾಂಗುಷ್ಠದಿಂದ ಗಂಗೆ ಹರಿದು ಬಂದು ಲೋಕವೆಲ್ಲಾ ಪಾವನವಾಗುವ ಹಾಗೆ ಆಯಿತು. ಆ ಗಂಗೆಯಲ್ಲಿ ಮಿಂದವರೂ, ದಿನಂಪ್ರತಿ ಎಲ್ಲಿ ಮಿಂದರೂ, ಮೀಯುವಾಗ ಆ ವಿಯದ್ಗಂಗೆಯನ್ನು ಧ್ಯಾನಿಸುವವರೂ ಎಲ್ಲಾ ದುರಿತಗಳಿಂದಲೂ ವಿಮುಕ್ತರಾಗುತ್ತಾರೆ. ಆದ್ದರಿಂದ ಭಗವಂತನ ದಕ್ಷಿಣಚರಣ "ಶ್ರಿತ ದುರಿತಹರ". ಆ ಜಾನುವಿನಮೇಲೆ ದಕ್ಷಿಣ ಹಸ್ತವನ್ನಿಟ್ಟು ಎಡಬಾಹುವನ್ನು ನಾಗಭೋಗದ



ಶ್ರೀರಾಮ ಪಟ್ಟಾಭಿಷೇಕ

ಮೇಲಿಟ್ಟು ಕುಳಿತಿದ್ದಾನೆ ಸ್ವಾಮಿ. ಈ ಭಂಗಿ ವೀರಾಸನ ಭಂಗಿ. ಇಂಥಾ ವೀರಾಸನದಲ್ಲಿ ಪರಮ ಪದದಲ್ಲಿ ಸದಾಸುಸ್ಥಿತನಾಗಿದ್ದಾನೆ. ವಿಭವಾವತಾರದಲ್ಲಿಯೂ ಪ್ರಜೆಗಳ ಸುಖದುಃಖ ವಿಚಾರಣೆ ಕಾಲದಲ್ಲೂ, ನ್ಯಾಯವಿತರಣೆಯಕಾಲದಲ್ಲೂ ಮಂತ್ರಾಲೋಚನಾಕಾಲದಲ್ಲೂ ಆಸೀನನಾದಾಗ ರಾಜೋಚಿತವಾದ ಇದೇ ಭಂಗಿಯಲ್ಲಿ ಸುಖಸ್ಥಿತನಾಗಿರತಕ್ಕವನು ಶ್ರೀರಾಮ.

ಹೀಗೆ ಕುಳಿತುಕೊಳ್ಳಲು ಅವನಿಗೆ ಇರುವ ಪೀಠ ಮಣಿಮಯಪುಷ್ಪಕಮಾಸನ. ಅವನು ಕುಳಿತುಕೊಳ್ಳುವ ಆಸನ ರತ್ನಮಯವಾಗಿಯೂ ಪುಷ್ಪಮಯವಾಗಿಯೂ ಇರುವ ಆಸನ, ರತ್ನವು ಹೇಗೆ ಪ್ರಕಾಶಿಸಿ ಎಲ್ಲರನ್ನೂ ತನ್ನ ಬಳಿಗೆ ಸೆಳೆಯುತ್ತದೋ ಹಾಗೆ ಶ್ರೀರಾಮನು ಪರಮಪದದಲ್ಲೂ ಅಯೋಧ್ಯಾ ರಾಜಪೀಠದಲ್ಲೂ ವಿರಾಜಿಸುತ್ತಿದ್ದನು. ಇದರ ಜೊತೆಗೆ ಅದು ಪುಷ್ಪಮಯವಾದ ಆಸನವೂ ಅದುದರಿಂದ ಪುಷ್ಪಗಳು ಹೇಗೆ ರೂಪಿನಿಂದ ನಯನ ಮನೋಹರವೂ, ಹಿತವಾಗಿ ಕಂಪಿನಿಂದ ಉಲ್ಲಾಸಕರವೂ, ಮೃದುವಾದ ಸ್ಪರ್ಶದಿಂದ ಸುಖಕರವೂ ಆಗಿವೆಯೋ ಹಾಗೆ ಈ ಆಸನವೂ ಆಕರ್ಷಕ ಉಲ್ಲಾಸದಾಯಕ ಸುಖದಾಯಕ ಆಸನವಾಗಿ ಮಂಗಳಕರವಾದ ಭದ್ರಾಸನವಾಗಿದೆ. ರಾಮ ಎಂದರೆ "ರಂಜಯತಿ, ರಮಯತಿ" ಎಂಬ ಅರ್ಥ ವಿಶೇಷಗಳಿರುವಂತೆ ಅವನ ಆಸನವೂ ಹಾಗೆಯೇ ಇದ್ದು ಶ್ರೀರಾಮನಿಗೆ ಹೆಚ್ಚು ಅನ್ವರ್ಥವೆನಿಸಿದವು. ಶ್ರೀರಾಮನ ಆಸನವು ಹೀಗೆ ರತ್ನಮಯವೂ ಪುಷ್ಪಮಯವೂ ಆಗಿದ್ದಂತೆಯೇ ಅವನ ಹೃದಯಪೀಠವೂ ರತ್ನಮಯವೂ ಪುಷ್ಪಮಯವೂ ಆಗಿ ಭಕ್ತರಿಗೆ ಅದು ಅರ್ಪಿತವಾಗಿ ಅವನು ಭಕ್ತ ಪರಾಯಣನಾಗಿದ್ದಾನೆ, ಭಕ್ತರ ಯೋಗಕ್ಷೇಮ ನಿರ್ವಾಹಕನಾಗಿದ್ದಾನೆ.

ಈ ಮಣಿಮಯವಾದ ಪುಷ್ಪಮಯವಾದ ಪೀಠವನ್ನು ಇಟ್ಟಿರುವುದು "ಸುರದ್ರುಮತಲೇ, ಹೈಮೇ ಮಹಾಮಂಟಪೇ,". ಅಂದರೆ ಕಲ್ಪವೃಕ್ಷದ ಅಡಿಯಲ್ಲಿ ಚಿನ್ನದಮಂಟಪದಲ್ಲಿ. ವೇದಾಂತದಿಂದ ತಿಳಿದು ಬರುವುದು ಚಿತ್, ಅಚಿತ್ ಮತ್ತು ಈಶ್ವರ ನೆಂಬ ತತ್ತ್ವ ತ್ರಯಗಳು ಅಜರಾಮರಗಳು, "ನ ಜಾಯತೇ ನಮ್ರಿಯತೇ,". ಆದ್ದರಿಂದಲೇ ಪರತತ್ತ್ವವನ್ನು ಶ್ರೀಮದ್ರಾಮಾನುಜರು "ಚಿದಚಿದಾತ್ಮಕ; ಶ್ರೀಮನ್ನಾರಾಯಣ" ಎಂದು ಶ್ರುತಿಗಳಾಧಾರದಿಂದ ಉದ್ಘೋಷಿಸಿದ್ದಾರೆ. ಶ್ರೀಮನ್ನಾರಾಯಣನ ಸಂಕಲ್ಪಕ್ಕನುಸಾರವಾಗಿ ಚಿದಚಿದ್ವಸ್ತುಗಳು ನಾಮರೂಪಾದಿಗಳನ್ನು ಹೊಂದಿ ಮಾರ್ಪಾಡು ಹೊಂದುವ ವಸ್ತುಗಳಾಗಿವೆ. ಈ ಪರತತ್ತ್ವದ ಸಂಕಲ್ಪವೇ ಸುರದ್ರುಮ, ಹೈಮಮಂಟಪ. ಚಿನ್ನವು ಲೋಹಗಳಲ್ಲಿ ಶ್ರೇಷ್ಠ ಅದು ತಪ್ತವಾದಷ್ಟೂ ಅದರ ಕಾಂತಿ ಹೆಚ್ಚು. ಇದು ನಿಶ್ಶೈರ್ಶ್ವರ್ಯ ಸೂಚಕ. ಸಕಲ ವಿಧವಾದ ಸಂಪತ್ತೂ ಇದರಿಂದ ಸೂಚಿತ, ಆ ಚಿನ್ನದ ಮಂಟಪ ಕಲ್ಪವೃಕ್ಷದ ಅಡಿಯಲ್ಲಿದೆ. ಕಲ್ಪವೃಕ್ಷವಾದರೋ ಕೇಳಿದವರಿಗೆ ಕೇಳಿದುದನ್ನೂ ಕೊಡತಕ್ಕದ್ದು. ಈ ಸುರದ್ರುಮದಡಿಯಲ್ಲಿ ನಿಂತು ಪ್ರಾರ್ಥಿಸಿದರೆ ಸಕಲ ಐಶ್ವರ್ಯ ಭಾಗ್ಯಗಳೂ ದೊರಕುವುವು, ಭಗವಂತನ ಸನ್ನಿಧಿಯಲ್ಲಿ ಯಾವುದಕ್ಕೂ ಕೊರತೆಯಿಲ್ಲ. ಅವನಿಗೂ ಕೊರತೆಯಿಲ್ಲ, ಅವನನ್ನು ಬೇಡುವ ಅರ್ತಿಗಳಿಗೂ ಕೊರತೆಯಿಲ್ಲ. ಆದರೆ ಅವನಾಗಿ ಕೊಡುವುದಿಲ್ಲ, ನಾವಾಗಿ ಬೇಡಬೇಕು.

ಬೇಡುವವನು ಸತ್ಪಾತ್ರನಾಗಿರಬೇಕು, ಅವನ ಅರ್ಹತೆ "ರಾಮಂಭಜೇ''. ಈ ಉದ್ದೇಶದಿಂದ ರಾಮನನ್ನು ಸಕಲಪ್ರಕಾರದಿಂದಲೂ ಸೇವಿಸಬೇಕು, ಸೇವಿಸುವ ಪ್ರಕಾರವನ್ನು ಆಂಜನೇಯಸ್ವಾಮಿಯ ಮೂಲಕ ತಿಳಿಯಬೇಕು. ಆತನು ಪರತತ್ತ್ವವನ್ನೂ, ದೈವಾನುಗ್ರಹ ಹೊಂದುವ ವಿಧಾನವನ್ನೂ ಮುನಿಗಳಿಂದ ಹೇಳಿಸುತ್ತಾನೆ. ಪರತತ್ತ್ವದಲ್ಲಿ ಹೇಗೆ ಎಂಬುದನ್ನು ತಿಳಿಸಲು ಸಮರ್ಥರೂ ಯೋಗ್ಯರೂ ಆದವರು ಮುನಿಗಳು. ಪರೋಕ್ಷಜ್ಞಾನ ಹೊಂದಿದವರು. ಅರಣ್ಯಕದಲ್ಲಿ ಪ್ರತಿಪಾದಿತನಾದ ಪರಮಪುರುಷನನ್ನು ಅರಣ್ಯವಾಸಿಗಳಿಂದ ಮುನಿಗಳಿಂದಲೇ ಹೇಳಿಸುತ್ತಿದ್ದಾನೆ. ವಿಭವಾವತಾರದಲ್ಲಿ ದಂಡಕಾರಣ್ಯದಲ್ಲಿ ಮುನಿಗಳಿಗೆ ಶ್ರೀರಾಮನು ತಾನೇ ಪ್ರತ್ಯಕ್ಷನಾಗಿ ಕಾಣಿಸಿಕೊಂಡ, ಮುನಿಜನರು ಪ್ರತಿಪಾದಿಸುತ್ತಿದ್ದ ಆರಣ್ಯಕ ವಿಷಯಗಳು ಗೂಢವೂ ಗಾಢವೂ ಆಗಿದ್ದುದರಿಂದ ಅಲ್ಪಚೇತನರಿಗೆ, ಮಂದಮತಿಗಳಿಗೆ ಸ್ಪಷ್ಟವಾಗಿ ಎಲ್ಲಿ ತಿಳಿಯದೇ ಹೋಗುವುದೋ ಎಂಬ ಕಾತರತೆಯಿಂದ ಪರಮಪುರುಷನನ್ನು ರಾಮರೂಪದಲ್ಲೂ, ಪರಮಪುರುಷಪ್ರಾಪ್ತಿಗೆ ಬೇಕಾದ ವಿಷಯಗಳನ್ನು ವಿಭವಾವತಾರದಲ್ಲಿ ವ್ಯಕ್ತಿಸಂಕೇತರೂಪವಾಗಿಯೂ ಶ್ರೀರಾಮನ ಸುತ್ತ ಭರತ, ಲಕ್ಷ್ಮಣ, ಶತ್ರುಘ್ನ ಮತ್ತು ಆಂಜನೇಯ ರೂಪವಾಗಿ ಮುನಿಗಳ ಹೇಳಿಕೆಗೆ ವ್ಯಾಖ್ಯಾನವೋ ಎಂಬಂತೆ ಗೋಚರವಾಗಿವೆ. ಪರದಲ್ಲಿ ಭಗವಂತನನ್ನು ಹೊಂದಲು ಮಾಡಬೇಕಾದ ಕರ್ತವ್ಯಗಳು ಬಹಳ, ಅರಿಷಡ್ವರ್ಗದಿಂದ ಕೂಡಿದ ಸಂಸಾರಿ ಜೀವನು ಮೊದಲು ಅವುಗಳ ನಿತ್ಯ ಶತ್ರುಘ್ನನಾಗಿ ಸತ್ಸಂಗದಿಂದ ಶಮದಮಾದಿ ಗುಣ ಸಂಪನ್ನನಾಗಬೇಕು. ಇದಕ್ಕಾಗಿ ಅವನು ಶತ್ರುಘ್ನನಂತೆ ಭಾಗವತ ಕೈಂಕರ್ಯದಲ್ಲಿ ಈಜಾಡಬೇಕು. ತನ್ಮೂಲಕ ಭಗವಂತನ ಕೈಂಕರ್ಯ ಶ್ರೀಯಲ್ಲಿ ಸಮರ್ಪಣ ಮಾಡಿಕೊಳ್ಳಬೇಕು. ಲಕ್ಷ್ಮಣನಂತೆ ಜಾಗ್ರತ ಸ್ವಪ್ನ ಭಗವಂತನ ಅಡಿಯಾಳಾಗಿ ಸೇವಾತತ್ಪರನಾಗಬೇಕು. ಲಕ್ಷ್ಮಣನು ಹೀಗೆ ನಡೆದೇ ಲಕ್ಷ್ಮಿಸಂಪನ್ನ ಎನ್ನಿಸಿಕೊಂಡ. ಭಗವದ್ಭಾಗವತರ ಸೇವೆಯಲ್ಲಿ ಸಮರ್ಪಿಸಿ ಕೊಳ್ಳುವವನು ಭರತನಂತೆ ಭಗವಂತನಲ್ಲಿ ಭರಸಮರ್ಪಣೆ ಮಾಡಬೇಕು, ಭಗವಂತನಲ್ಲಿ ಭಕ್ತಿ ಪ್ರಪತ್ತಿ ಸಹಿತನಾಗಿ ಸರ್ವವೂ ಶ್ರೀರಾಮನೇ, ಸರ್ವಸ್ವವೂ ಶ್ರೀರಾಮನಿಗೇ, ಸಮಸ್ತವೂ ಶ್ರೀರಾಮನಿಂದಲೇ ಎಂಬ ಭಾವ ಸಂಪತ್ತು ಭಾವನಾಸಂಪತ್ತುಗಳನ್ನು ಹೊಂದಿ, ತುಂಬು ಹೃದಯದವನಾಗಿರಬೇಕು. ಈ ಪರಿಪಕ್ವ ಮಾನಸಿಕ ಪರಿಸ್ಥಿತಿಯಲ್ಲಿ

(24ನೆ ಪುಟ ನೋಡಿ)


**ಸಂದರ್ಶಿಸಿ** **ಆನಂದಿಸಿ**

# ಪ್ರಾಚ್ಯ ವಸ್ತು ಸಂಗ್ರಹಾಲಯ

(ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಎದುರು)

**ಸಾವಿರ ಕಂಬದ ಸಭಾಂಗಣ**

ತಿರುಮಲೆ.

ಲೋಹ, ಮೃಚ್ಛಿಲಾದಾರು ಕೆತ್ತನೆಗಳ, ವಿವಿಧ ಸಂಗೀತೋಪಕರಣಗಳ, ಮತ್ಸ್ಯ, ಪ್ರಾಚೀನ ಕಾಲದ ಆಯುಧಗಳ, ಮಿಗಿಲಾಗಿ – ತಿ. ತಿ. ದೇವಸ್ಥಾನಗಳ ವಿವರಗಳ ಅಪೂರ್ವ ಸಂಗ್ರಹಾಲಯ.

ಪ್ರವೇಶ ದರ : ರೂ. **1–00** ಮಾತ್ರ.

# ದೊಡ್ಡವರ ದಾರಿ

ಜ್ಞಾನ ಸಮುದ್ರವನ್ನು ಕಡೆಯಲು ಶ್ರದ್ಧೆಯ–ಕಡೆಗೋಲು ಅವಶ್ಯಕ. ಆಗಲೇ ನಮ್ಮ ಬದುಕಿಗೆ ಉಪಯೋಗವಾದ 'ಅಮೃತ' ದೊರಕುತ್ತದೆ. ಇದನ್ನು ಹೇಗೆ ಪಡೆಯುವುದು ಎಂಬುದನ್ನು ತಿಳಿಸಿಕೊಡುವವರು "ದೊಡ್ಡವರು". ದೊಡ್ಡವರು ಅಂದರೆ ಯಾರು ? ಹೊಯಿಸಳರ ಮಾತಿನಲ್ಲಿ–

ದುಡ್ಡು ಬಟ್ಟೆಯಿಂದ ದೊಡ್ಡವ<br>ರಾದೋರಿಲ್ಲ;<br>ದೊಡ್ಡ ಗುಣವಿದ್ದು ದೊಡ್ಡವ<br>ರಾದೋರೆಲ್ಲ !<br>ಮೈಯ ಬಣ್ಣದಿಂದ ದೊಡ್ಡವ<br>ರಾದೋರಿಲ್ಲ ;<br>ದೊಡ್ಡ ಕೆಲಸ ಮಾಡಿ ದೊಡ್ಡವ<br>ರಾದೋರೆಲ್ಲ !

ಅಂದರೆ – ದೊಡ್ಡವರಲ್ಲಿ 'ದೊಡ್ಡಗುಣ' ಪ್ರಧಾನವಾಗಿದೆ ಎಂದಹಾಗಾಯ್ತು. 'ದೊಡ್ಡತನ' ಯಾವುದು? ಸ್ವಾಮಿಶಿವಾನಂದರು– ಮಾನವನಿಗೆ –

ಸತ್ಯ ಭಾಷಣವೇ ಸ್ಥಿರವಾದ ಐಶ್ವರ್ಯ<br>ಧರ್ಮಾಚರಣೆಯೇ ರಕ್ಷಣೋಪಾಯ<br>ಕ್ರೋಧ ಸಹನೆಯೇ ಸಕಲ<br>ಶ್ರೇಯಸ್ಸಿನ ಮೂಲ<br>ಆಶಾವಾದವೇ ಜೀವನದ ಬುನಾದಿ<br>ಅತಿ ಆಸೆಯೇ ಅಲ್ಪಾಯಸ್ಸು<br>ಅಸೂಯಾಪರಿತ್ಯಾಗವೇ ಆರೋಗ್ಯ<br>ಭಾಗ್ಯ<br>ಉಪಕಾರ ಸ್ಮರಣೆಯೇ ನೈತಿಕಬಲ<br>ಪರೋಪಕಾರವೇ ಅಧಿಕಾರ<br>ಪ್ರಯೋಜನ<br>ಸತ್ಕಾರ್ಯಕ್ಕೆ ಅಡ್ಡಿತರದಿರುವುದೇ<br>ದೊಡ್ಡತನ<br>ಗುರು ದೇವತಾ ವಿಶ್ವಾಸವೇ<br>ಬೆಳಕಿನ ದಾರಿ

ಎಂಬುದಾಗಿ ತಿಳಿಸಿಕೊಟ್ಟಿದ್ದಾರೆ. ನೀತಿ ಶತಕವು ದೊಡ್ಡ ಗುಣವುಳ್ಳ ಸಜ್ಜನರ ಲಕ್ಷಣಗಳನ್ನು ಹೀಗೆ ಸ್ಪಷ್ಟಪಡಿಸುತ್ತದೆ.

"ದುರಾಸೆಯನ್ನು ತ್ಯಜಿಸಿ, ಕ್ಷಮಾಗುಣವನ್ನು ಆಶ್ರಯಿಸಿ, ಗರ್ವವನ್ನು ಬಿಟ್ಟು, ಪಾಪ ಕೃತ್ಯದಲ್ಲಿ ಆಸಕ್ತಿಯಿಡದೆ, ಸತ್ಯ ನುಡಿದು, ಸಜ್ಜನರ ಮಾರ್ಗವನ್ನನುಸರಿಸಿ, ವಿದ್ವಾಂಸರನ್ನು ಸೇವಿಸಿ, ಹಿರಿಯರನ್ನು ಗೌರವಿಸಿ ವೈರಿಗಳನ್ನು ಸಂತೈಸಿ, ತನ್ನ ಗುಣಗಳನ್ನು ಹೊರಗೆ ತೋರಿಸಿಕೊಳ್ಳದೆ ಅಡಗಿಸಿಟ್ಟುಕೊಂಡು ಕೀರ್ತಿಯನ್ನು ಉಳಿಸಿಕೊಂಡು, ದುಃಖಿತರಲ್ಲಿ ದಯೆ ತೋರುವುದೇ ದೊಡ್ಡವರ ಲಕ್ಷಣಗಳು".

ಶಿವಶರಣ ತೋಂಟದಸಿದ್ಧಲಿಂಗರು ದೊಡ್ಡವರ ನಡೆ– ನುಡಿ ಬಗ್ಗೆ –

ನಡೆಯೊಳಗೆ ನುಡಿ ತುಂಬಿ<br>ನುಡಿಯೊಳಗೆ ನಡೆ ತುಂಬಿ<br>ನಡೆ – ನುಡಿಯೊಳಗೆ ಪರಿಪೂರ್ಣ ತುಂಬಿ<br>ಲಿಂಗವ ಕೂಡ ಬಲ್ಲಾತನೆ ಶರಣ<br>ನೋಡ ಅಖಂಡೇಶ್ವರ – ಎಂದಿದ್ದಾರೆ.

ಸುಭಾಷಿತವೊಂದರಲ್ಲಿ –

ಯಥಾ ಚಿತ್ತಂ ತಥಾ ವಾಚೋ<br>ಯಥಾ ವಾಚ ಸ್ತಥಾ ಕ್ರಿಯಾಃ।<br>ಚಿತ್ತೇ ವಾಚಿ ಕ್ರಿಯಾಯಾಂಚ<br>ಸಾಧೂ ನಾಮೇಕರೂಪತಾ ॥

ಮನಸ್ಸಿನಲ್ಲಿದ್ದಂತೆ ದೊಡ್ಡವರು ಹೊರಗೆ ಮಾತಾಡಿ ತೋರಿಸುತ್ತಾ, ಮಾತಿನಂತೆ ಅವರ ಕೃತಿಯು, ಮನಸ್ಸು, ಮಾತು, ಕ್ರಿಯೆಗಳಲ್ಲಿ ಒಂದೇ ಬಗೆಯಾಗಿ ಇರುತ್ತವೆ.

ಜನಸಾಮಾನ್ಯರು ತಮ್ಮ ಅಭಿಪ್ರಾಯಗಳನ್ನು ಬಹಿರಂಗಪೇಟೆಯಲ್ಲಿ ಸಿದ್ಧವಸ್ತುವಾಗಿ ಪಡೆದು ಕೊಂಡರೆ–ಅಸಾಮಾನ್ಯರು (ದೊಡ್ಡವರು) ತಮ್ಮ ಅಭಿಪ್ರಾಯಗಳನ್ನು ಅಂತರಂಗದಪೇಟೆಯಲ್ಲಿ ಸಿದ್ಧವಸ್ತುವಾಗಿ ಪಡೆದುಕೊಂಡಿರುತ್ತಾರೆ. ಇಂಥವರನ್ನು – ಪಂಪಕವಿ (ಬನವಾಸಿ ದೇಶವನ್ನು ವರ್ಣಿಸುವಾಗ)

ಚಾಗದ ಭೋಗದ ಅಕ್ಕರದ ಗೇಯದ<br>ಗೊಟ್ಟಿಯಲಂಪಿನ ಮಾನಸರೇ–ಮಾನ<br>ಸರ್

ಎಂದು ತಿಳಿಸಿದರೆ–ರನ್ನಕವಿ ಮಹನೀಯರಿಗೆ ಕೀರ್ತಿಯ ಆಭರಣ ಐಶ್ವರ್ಯವಲ್ಲ ಎನ್ನುತ್ತಾನೆ.

ಒಡಲೊಡಮೆಯೆಂಬಿವೆರಡುಂ<br>ಕೆಡಲಿರ್ಪುವು– ಕೆಡದ ಕಸವರಂ ಜಸಮ್

ದೊಡ್ಡವರೆಂದು ಕರೆಯಲ್ಪಡುವ ವ್ಯಕ್ತಿಗಳು, ತಮ್ಮ ಇಡೀಬಾಳ್ವೆಯನ್ನು ಇತರರ ಶ್ರೇಯಸ್ಸಿಗಾಗಿ ತ್ಯಾಗಮಾಡುತ್ತಾರೆ. ಇಷ್ಟೇ ಅಲ್ಲದೆ ತಮ್ಮ ತನುಮನಗಳನ್ನು ಸೇತುವೆಯೋಪಾದಿಯಲ್ಲಿ ಅಳವಡಿಸಿಕೊಂಡು ಲಕ್ಷೋಪಲಕ್ಷ ಜನರು ಜೀವನದ ಪ್ರವಾಹವನ್ನು ಸುರಕ್ಷಿತವಾಗಿ ದಾಟಲು ಸಹಾಯ ಮಾಡುತ್ತಾರೆ, ಇಂಥವರು ಹೇಗಿರುತ್ತಾರೆ ಎಂದಾಗ ಡಿ. ವಿ. ಜಿ. ಯವರ 'ಮಂಕುತಿಮ್ಮನ ಕಗ್ಗ'ದಿಂದ ಬಿಡಿ ಪದ್ಯವನ್ನು ಉದಾಹರಿಸಬಹುದು–

ಗರ್ವ ಪಡದುಪಕಾರಿ, ದರ್ಪಬಿಟ್ಟಧಿ<br>ಕಾರಿ।<br>ನಿರ್ವಿಕಾರದ ನಯನದಿಂ ನೋಳ್ಪುದಾರಿ॥<br>ಸರ್ವಧರ್ಮಾಧಾರಿ, ನಿರ್ವಾಣ ಸಂಚಾರಿ।<br>ಉರ್ವರೆಗೆ ಗುರುವವನು........... ॥

ಮಹನೀಯರ ದೃಷ್ಟಿ ಸೃಜನಶೀಲ ಶಿಲ್ಪಿಯಂತೆ, ಪ್ರತ್ಯುತ್ಪನ್ನ ಮತಿಗಳಾಗಿರುತ್ತಾರೆ. ಶಿಲ್ಪಿ ಬಂಡೆಯನ್ನು ನೋಡಿದಾಗ– ಇಂಥದೇ ಶಿಲ್ಪವನ್ನು ಕಡೆಯಬಹುದೆಂದು ಅದೇ ಅವನಲ್ಲಿ ಮೂರ್ತೀಭವಿಸಿ ನಿಲ್ಲುತ್ತದೆ, ಅದೇ ರೂಪ ತಾಳುತ್ತದೆ. ಉಳಿದವು ಆತನಿಗೆ ಗೌಣ ಅಲ್ಲವೇ !

**ಮತ್ತೀಗೆರೆ ಅನಂತು**

ಶ್ರದ್ಧೆಯಿಂದಲೇ ಅದ್ಭುತ ಸಿದ್ಧಿ ಶ್ರದ್ಧಾವಂತನು ಭರ್ತೃಹರಿ ಹೇಳುವಂತೆ –

ನಿಂದಂತು ನೀತಿ ನಿಪುಣಾ
ಯದಿ ವಾಸ್ತುವಂತು ಲಕ್ಷ್ಮೀ
ಸಮಾವಿಶತು ಗಚ್ಛತು ವಾ ಯಥೇಷ್ಟಂ
ಅದ್ಯೈವಾ ಮರಣಸ್ತು
ಯುಗಾಂತರೇವಾ ನ್ಯಾಯಾತ್ಪಥಃ
ಪ್ರವಿಚಲಂತಿ ಪದಂ ನ ಧೀರಾಃ

ನೀತಿನಿಪುಣರು ನಿಂದಿಸಲಿ ಅಥಾವ ಹೊಗಳಲಿ, ಧನಲಕ್ಷ್ಮಿ ಈಗ ಬರಲಿ, ಅಥಾ ಇನ್ನೂ ನೂರು ವರುಷಗಳಾದ ಮೇಲೆ ಬರಲಿ, ಸತ್ಯಪಥದಿಂದ ಯಾರು ಒಂದು ಅಂಗುಲವೂ ಸರಿಯುವುದಿಲ್ಲವೋ ಅವರೇ ಧೀರರು.

ಯಾರು ತಮ್ಮ ಇರುವಿಕೆಯನ್ನು ತಿಳಿಯುತ್ತಾರೋ ಅವರೇ ದೊಡ್ಡವರು ಎನ್ನುತ್ತದೆ ತೈತ್ತರೀಯ ಉಪನಿಷತ್ ಕೂಡ –

ಅಸನ್ನೇವ ನ ಭವತಿ
ಅಸ ದ್ಬ್ರಹ್ಮೇತಿ ವೇದ ಚೇತ್ ।
ಅಸ್ತಿ ಬ್ರಹ್ಮೇತಿ ಚೇದ್ವೇದ
ಸನ್ತಮೇನಂ ತತೋ ವಿದುಃ ॥

'ಪೆದ್ದುಲ ಸುದ್ದುಲು ವಿನಕ ಬುದ್ಧಿರಾದು' ತ್ಯಾಗರಾಜರ ನುಡಿ. ಅಂದರೆ ದೊಡ್ಡವರ ದಾರಿಯನ್ನು ತುಳಿಯದೆ ನಮಗೆ ಬುದ್ಧಿ ಅಲಭ್ಯ- ಒಮ್ಮೆ ಅಸೂಯಾಪರಾದ ಕೆಲವರು ವೇದಾಂತ ದೇಶಿಕರನ್ನು ಅಗೌರವ ಪಡಿಸಬೇಕೆಂದು, ಅವರ ಮನೆಯ ಬಾಗಿಲಿಗೆ ಹಳೆಯಚಪ್ಪಲಿಗಳನ್ನು ತೋರಣವಾಗಿ ಕಟ್ಟಿದರು......ಆದರೆ ಆ ಮಹನೀಯರು ತಮ್ಮ ತಲೆಗೆ ಅವು ತಗುಲಿದರೂ ಸಹ ಸ್ವಲ್ಪವಾದರೂ ವಿಷಾದಪಡದೆ "ಈ ಜಗತ್ತಿನಲ್ಲಿ ಮುಕ್ತಿಗಾಗಿ 'ಕೆಲವರು ಗರ್ವಮಾರ್ಗವನ್ನೂ, ಮತ್ತೆ ಕೆಲವರು ಜ್ಞಾನಮಾರ್ಗವನ್ನು ಆಶ್ರಯಿಸುವರು, ಆದರೆ ನಾನು ಹರಿದಾಸರ ಪಾದರಕ್ಷೆಗಳನ್ನು ಸದಾ ಶಿರಸ್ಸಿಗೆ ಮುಟ್ಟಿಸುತ್ತಾ ಭಕ್ತಿ ಮಾರ್ಗವನ್ನು ಅವಲಂಬಿಸುವೆನು" – ಎಂದು ಸಂತೋಷದಿಂದ ಹೇಳಿದಾಗ – ಆ ಕೆಟ್ಟ ಕಾರ್ಯಮಾಡಿದ ದುಷ್ಟರು ಲಜ್ಜೆಯಿಂದ ಪಶ್ಚಾತ್ತಾಪಪಟ್ಟು ವೇದಾಂತ ದೇಶಿಕರಿಗೆ ಶರಣಾಗತರಾದರು.

ಲೌಕಿಕ ದೃಷ್ಟಿಯುಳ್ಳವರಿಗೆ ದೊಡ್ಡವರು ಕಲಿಸುವ ಪಾಠ ಪರಿಣಾಮಕಾರಿಯಾಗಿರುತ್ತದೆ. ಒಂದುಸಲ ಶ್ರೀರಾಮ ಕೃಷ್ಣರ ಬಳಿಗೆ ವೈದ್ಯರೊಬ್ಬರು ಹೋಗಿ "ಏನಯ್ಯ ನಿನ್ನ ಕಾಲವನ್ನೆಲ್ಲಾ ಈ ದೇವರ ಹುಚ್ಚುತನದಲ್ಲೇ ವ್ಯರ್ಥ ಮಾಡುತ್ತಿರುವೆಯಲ್ಲಾ ......... ಏಕೆ?" ಎಂದರು. ಆಗ ಪರಮಹಂಸರು "ನೋಡು, ಈ ಪ್ರಪಂಚವೆಲ್ಲ ಒಂದು ಹುಚ್ಚರ ಆಸ್ಪತ್ರೆಯಾಗಿರುತ್ತದೆ. ಇದರಲ್ಲಿರುವವರೆಲ್ಲ ಹುಚ್ಚರೇ ಆಗಿರುತ್ತಾರೆ. ಕೆಲವರು ಧನಕ್ಕೋಸ್ಕರ, ಕೆಲವರು ಕೀರ್ತಿಗೋಸ್ಕರ – ಕೆಲವರು ಸ್ತ್ರೀಯರಿಗೋಸ್ಕರ, ಕೆಲವರು ವಿಷಯ ಭೋಗಗಳಿಗೋಸ್ಕರ, ತಮ್ಮ ಕಾಲ್ಲವನ್ನೆಲ್ಲಾ ವ್ಯರ್ಥವಾಗಿ ಕಳೆಯುತ್ತಿದ್ದಾರೆ. ಅಲ್ಲವೇ? ಆದರೆ ನನಗೆ ಇಂಥ ಹುಚ್ಚು ಹಿಡಿಯದೆ ದೇವರ ವಿಷಯವಾಗಿ ಹುಚ್ಚು ಹಿಡಿದಿದೆ ಅಷ್ಟೆ" ಎಂದರು. ಪರಿಣಾಮಕಾರಿಯಾದ ಉತ್ತರವಲ್ಲವೇ!

ಶ್ರೀ ರಾಮಾಯಣದಲ್ಲಿ, ರಾವಣ, ಕುಂಭಕರ್ಣ, ವಿಭೀಷಣ ಎಲ್ಲರೂ ಬ್ರಹ್ಮ ದೇವನನ್ನು ಪ್ರತ್ಯಕ್ಷ ಮಾಡಿಕೊಂಡರು. ರಾವಣನು ಮಾನವರ ಹೊರತು ಯಾರಿಂದಲೂ ಸಾವು ಬೇಡ ಎಂದು ವ್ಯರ್ಥವರ ಕೇಳಿ ಸತ್ತ, ಕುಂಭಕರ್ಣ ದೀರ್ಘ 'ನಿದ್ರೆ'ಯನ್ನೇ ಕೇಳಿ ಬದುಕಿಯೂ ಸತ್ತ, ವಿಭೀಷಣ ಮಾತ್ರ –

ಪರಮಾಪದ್ಗತ ಸ್ಯಾಪಿ
ಧರ್ಮೇ ಮಮ ಮತಿರ್ಭವೇತ್ ।
ಯಾ ಯಾ ಮೇ ಜಾಯತೇ ಬುದ್ಧಿಃ
ಯೇಷು ಯೇಷ್ವಾಶ್ರಮೇಷು ಚ ।
ಸಾ ಸಾ ಭವತು ಧರ್ಮಿಷ್ಠಾ
ತಂ ತಂ ಧರ್ಮಂ ಚ ಪಾಲಯೇ ॥

ಎಂಬುದಾಗಿ ಪ್ರಾರ್ಥಿಸಿದ ಅಂದರೆ "ಎಂಥ ಆಪತ್ತಿನಲ್ಲೂ ನಾನು ಧರ್ಮದ ಬುದ್ಧಿಯಲ್ಲೇ ಇರುವಂತಾಗಲಿ. ನಾನು ಯಾವ ಅವಸ್ಥೆ, ಆಶ್ರಮದಲ್ಲೇ ಇರಲಿ, ನನ್ನ ಬುದ್ಧಿಯು ಮಾತ್ರ ಸದಾ ಧರ್ಮದಲ್ಲೇ ಇರಲಿ, ಇದನ್ನೇ ಪಾಲಿಸುವಂತಾಗಲಿ". ಇದಲ್ಲವೇ ಶ್ರೇಯಸ್ಸಿನ ದಾರಿ.

ಮಹಾತ್ಮರ ದಾರಿಯನ್ನು ಸಂಪೂರ್ಣವಾಗಿ ಅನುಸರಿಸಲು ಆಗದಿದ್ದರೆ, ನಮ್ಮ ಕೈಯಲ್ಲಾದಷ್ಟನ್ನಾದರೂ, ಅನುಸರಿಸಬೇಕು. ಏಕೆಂದರೆ ದೊಡ್ಡವರ ದಾರಿಯಲ್ಲಿರುವವನ ಕೆಡುವುದಿಲ್ಲ. ಮಹರ್ಷಿ ವ್ಯಾಸರು–

ಸತ್ಯೇನ ರಕ್ಷ್ಯತೇ ಧರ್ಮಃ
ವಿದ್ಯಾ ಯೋಗೇನ ರಕ್ಷ್ಯತೇ ।
ಮೃಜಯಾ ರಕ್ಷ್ಯತೇ ರೂಪಂ
ಕುಲಂ ವೃತ್ತೇನ ರಕ್ಷ್ಯತೇ ॥

ಧರ್ಮವು ಸತ್ಯದಿಂದ ರಕ್ಷಿಸಲ್ಪಡುತ್ತದೆ. ವಿದ್ಯೆಯು ಅನವರತವೂ ಮಾಡುವ ಅಧ್ಯಯನ ಯೋಗದಿಂದ ರಕ್ಷಿಸಲ್ಪಡುತ್ತದೆ. ಶುಚಿಯಾಗಿರುವುದರ ಮೂಲಕ ರೂಪವು ರಕ್ಷಿಸಲ್ಪಡುತ್ತದೆ. ನಮ್ಮ ಕುಲವು ನಡತೆಯಿಂದ ರಕ್ಷಿಸಲ್ಪಡುತ್ತದೆ – ಎಂಬುದಾಗಿ ಮಾರ್ಗದರ್ಶನ ನೀಡಿದ್ದಾರೆ.

ನಮ್ಮ ಜೀವನ ಪಾವನವಾಗಬೇಕಾದರೆ ದಾಸ – ದಾಸೋಹಂ ಮಾಡಬೇಕು ಎನ್ನುತ್ತಾರೆ ಮಹನೀಯರು, ಇಲ್ಲಿ ಕುಲಶೇಖರ ಆಳ್ವಾರರ ಶ್ಲೋಕವೊಂದನ್ನು ಉದ್ಧರಿಸಬಹುದು–

................................

ತ್ವದ್ಭೃತ್ಯ ಭೃತ್ಯ
ಪರಿಚಾರಕ ಭೃತ್ಯ ಭೃತ್ಯ
ಭೃತ್ಯಸ್ಯ ಭೃತ್ಯ
ಇತಿ ಮಾಂ ಸ್ಮರ ಲೋಕನಾಥ ।

ಡಾ॥ ಜಿ. ವಿ. ರಾಜರತ್ನಂ ಅವರು ಸದ್ವ್ಯವಹಾರದ ಆಚಾರ ಹೀಗಿರಬೇಕು ಎನ್ನುತ್ತಾರೆ–

"ಮೈ ಬದುಕುವುದಕ್ಕೆ, ಮೈ ಬೆಳೆಯುವುದಕ್ಕೆ ಮೈ ಆರೋಗ್ಯವಾಗಿರುವುದಕ್ಕೆ ಎಷ್ಟೆಷ್ಟು ದುಡಿಯಬೇಕೋ ಅದಕ್ಕೆ ಬೇಕಾದ ದಾರ್ಢ್ಯವನ್ನು ಒದಗಿಸುವುದು ಮನಸ್ಸಿನ ಬದುಕು, ಮನಸ್ಸಿನ ಬೆಳವಣಿಗೆ, ಮನಸ್ಸಿನ ಆರೋಗ್ಯ. ಇದಕ್ಕೆ ಸಹಾಯಕವಾದದ್ದು ಸದ್ಗ್ರಂಥಗಳ ಸಹವಾಸ, ಸದ್ಭಾವನೆಗಳ ಸಾಹಚರ್ಯ, ಸದ್ವಾಕ್ಯಗಳ ಉಚ್ಚಾರ ಮತ್ತು ಸದ್ವ್ಯವಹಾರದ ಆಚಾರ"

ಇದು ದೊಡ್ಡವರ ದಾರಿ.



# ಮಕರ ಸಂಕ್ರಾಂತಿ

ಹಿಂದೂ ಧರ್ಮ ಸಂಸ್ಕೃತಿಗೆ ಆಶ್ರಯವಾಗಿರುವ ಭರತ ಖಂಡದಲ್ಲಿ ನಾವು ಧರ್ಮ ತತ್ತ್ವಗಳಿಗೆ ಅನುಸಾರವಾಗಿ ಅನೇಕ ಹಬ್ಬಗಳನ್ನು ಆಚರಿಸುತ್ತೇವೆ. ಅವುಗಳಲ್ಲಿ ನಾವು ದಕ್ಷಿಣ ಭಾರತದಲ್ಲಿ ಆಚರಿಸುವ ಮಕರ ಸಂಕ್ರಾಂತಿ ಅಥವಾ ಪೊಂಗಲ್ ಎಂದು ಕರೆಯುವ ಹಬ್ಬವೂ ಒಂದಾಗಿದೆ. ನಾವು ಆಚರಿಸುವ ಪ್ರತಿಯೊಂದು ಹಬ್ಬವೂ ಪ್ರಕೃತಿ, ಧರ್ಮ, ಸಂಸ್ಕೃತಿ ಭೂಮಾತೆಯೊಡನೆ ನಿಕಟ ಸಂಬಂಧವನ್ನು ಹೊಂದಿರುತ್ತದೆ. ಪ್ರಕೃತಿ ಮಾತೆಯ ಕೃಪಾಶ್ರಯದಿಂದಲೇ ಪ್ರಕೃತಿ ಸೌಂದರ್ಯಕ್ಕೆ ತವರುಮನೆ ಎನಿಸಿದ ಭರತ ಖಂಡವನ್ನು "ಸಸ್ಯ ಶ್ಯಾಮಲಾ'' ಎಂದು ಹಿರಿಯರು ಕರೆದಿರುವುದರಲ್ಲಿ ತಪ್ಪಿಲ್ಲ. ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ನಾವು ಹಬ್ಬಗಳ ಮೂಲಕ ಕೊಂಡಾಡಿ ಕೃತಾರ್ಥರಾಗುತ್ತೇವೆ.

ಪ್ರಾಕೃತಿಕ ಶಕ್ತಿಯ ಅಧಿದೇವತೆಯು ಸೂರ್ಯನು. ನಮ್ಮ ಹಿರಿಯರು ವೈದಿಕ ಮಂತ್ರಗಳಲ್ಲಿ "ಶಂ ನೋ ಭವತು ಆರ್ಯಮಾ'' ಎಂದು ಹೇಳುತ್ತಾರೆ. ಎಂದರೆ ಸೂರ್ಯ ದೇವನೇ ನಮ್ಮ ರಕ್ಷಣೆ ಮಾಡಲಿ ಎಂದರ್ಥ. ಸೂರ್ಯನ ಅನುಗ್ರಹ, ಕೃಪೆಯು ಸದಾ ನಮ್ಮ ಮೇಲಿದೆ. ಇದಕ್ಕೆ ಕೃತಜ್ಞತಾಪೂರ್ವಕ ಅವನನ್ನು ಕೊಂಡಾಡುವ ಹಬ್ಬವೇ ದಕ್ಷಿಣ ಭಾರತದಲ್ಲಿ ಪೊಂಗಲ್ ಎಂದು ಪ್ರಸಿದ್ಧಿ ಪಡೆದಿದೆ.

ಸೂರ್ಯನು ವರ್ಷದ ಆರು ತಿಂಗಳು ಭೂಮಿಯ ಉತ್ತರದಿಕ್ಕಿನಲ್ಲಿ ಹಾಗೂ ಆರು ತಿಂಗಳು ದಕ್ಷಿಣದಿಕ್ಕಿನಲ್ಲಿ ಚಲಿಸುತ್ತಾನೆ. ಸೂರ್ಯನ ಈ ರೀತಿಯ ನಿಯಮವನ್ನು ಉತ್ತರಾಯಣ ಹಾಗೂ ದಕ್ಷಿಣಾಯನವೆಂದು ಕರೆಯುತ್ತಾರೆ. ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಹೋಗುವುದಕ್ಕೆ ಸಂಕ್ರಾಂತಿ ಎನ್ನುವರು. ರವಿಯು ಮಕರ ವೃತ್ತದಿಂದ ಕರ್ಕಾಟಕ ವೃತ್ತದ ಕಡೆಗೆ ಚಲಿಸಲು ಆರಂಭಿಸುವ ದಿವಸವೇ ಮಕರಸಂಕ್ರಮಣ. ತಮಿಳಿನಲ್ಲಿ ಈ ಹಬ್ಬಕ್ಕೆ "ಪೊಂಗಲ್'' ಎಂದು ಹೆಸರು. ಈ ದಿನ ಸೌರಮಾನ ಪಂಚಾಂಗದ ಅನುಸಾರ ಪುಷ್ಯ ಮಾಸದ ಮೊದಲನೆ ತಾರೀಖು, ಕ್ಯಾಲೆಂಡರ್ ಅನುಸಾರ ಜನವರಿ ಹದಿಮೂರು, ಅಥವಾ ಹದಿನಾಲ್ಕನೆ ತಾರೀಖು ಆಗುತ್ತದೆ. ಪ್ರಮುಖವಾಗಿ ದಕ್ಷಿಣ ಭಾರತದ ತಮಿಳು ನಾಡಿನಲ್ಲಿ ಈ ಹಬ್ಬವನ್ನು ಹೆಚ್ಚು ಆಚರಿಸತ್ತಾರೆ.

ಪ್ರಕೃತಿದತ್ತವಾದ ಮಳೆ ಹಾಗೂ ಸೂರ್ಯನ ಬಿಸಿಲಿನಿಂದ ಚೆನ್ನಾಗಿ ಬೆಳೆ ಬೆಳೆದು ಜನರು ಸುಖದಿಂದ ಜೀವನ ನಡೆಸುವರೆಂದು ತಮಿಳು ನಾಡಿನಾದ್ಯಂತ ಜನರ ದೃಢನಂಬಿಕೆಯಿದೆ. ಪೊಂಗಲ್ ದಿವಸ ಹೊಸ ಫಸಲನ್ನು ಕೊಯ್ದು ಸೂರ್ಯನಿಗೆ ಅರ್ಪಿಸುವ ಕಾರ್ಯಕ್ರಮವಿರುತ್ತದೆ. ಪೊಂಗಲ್ ಹಬ್ಬದ ಪೂರ್ವಭಾವಿಯಾಗಿ ಮನೆವಠಾರಗಳನ್ನು ಶುಚಿಗೊಳಿಸುತ್ತಾರೆ. ಪೊಂಗಲ್ ಹಬ್ಬವನ್ನು ಎರಡು ಅಥವಾ ಮೂರು ದಿವಸಗಳ ಪರ್ಯಂತ ಆಚರಿಸುತ್ತಾರೆ. ಹಬ್ಬದ ಮೊದಲನೆ ದಿನವು ವಿಲಾಸೀಜೀವನಕ್ಕೆ ಮೀಸಲು. ಈ ದಿನ ಸೂರ್ಯದೇವನಿಗೆ ಪೂಜೆಮಾಡುತ್ತಾರೆ. ಹೊಸ ಫಸಲನ್ನು ಕೊಯ್ದು ಶೇಖರಿಸುತ್ತಾರೆ. ಮನೆಯ ಮುಂದಿನ ಅಂಗಳದಲ್ಲಿ ರಂಗೋಲೆ ಬಿಡಿಸಿ ತಮ್ಮ ತಮ್ಮ ಕುಲದೇವತೆಗಳನ್ನು ಪೂಜಿಸುತ್ತಾರೆ. ಸೂರ್ಯನು ಮಕರ ವೃತ್ತವನ್ನು ಪ್ರವೇಶಿಸಿ ಉತ್ತರಕ್ಕೆ ಕರ್ಕಾಟಕ ವೃತ್ತದ ಕಡೆಗೆ ಚಲಿಸುತ್ತಾನೆ. ಈ ಶುಭ ದಿನವನ್ನು ತಮಿಳಿನಲ್ಲಿ "ಮಾಸಪ್ಪಿರಪ್'' ಎನ್ನುತ್ತಾರೆ. ಅಂಗಳದಲ್ಲಿ ಸೂರ್ಯನ ಬಿಸಿಲು ಬೀಳುವಲ್ಲಿ ಹೊಸ ಅಕ್ಕಿಯನ್ನು ಬೇಯಿಸಿ ಅದಕ್ಕೆ ಬೆಲ್ಲ, ಹಾಲು ಸೇರಿಸಿ ಮಧುರವಾದ ಅನ್ನ ತಯಾರಿಸುವುದಕ್ಕೆ ತಮಿಳಿನಲ್ಲಿ ಪೊಂಗಲ್ ಎನ್ನುವರು. ಸೂರ್ಯನ ಪೂಜೆ ಬಳಿಕ ಈ ಮಧುರವಾದ ಅನ್ನವನ್ನು ತಿನ್ನುತ್ತಾರೆ. ಸ್ತ್ರೀಯರು, ವೀಳ್ಯದೆಲೆ, ಅಡಿಕೆ, ಬಾಳೆಹಣ್ಣು, ಕಬ್ಬು, ಎಳ್ಳು, ಬೆಲ್ಲ, ಅರಸಿನ, ಕುಂಕುಮ, ಬಳೆ, ಕನ್ನಡಿ ಮೊದಲಾದುವನ್ನು ಹರಿವಾಣದಲ್ಲಿಟ್ಟುಕೊಂಡು ತಮ್ಮ ನೆರೆಹೊರೆಯ ಸ್ತ್ರೀಯರಿಗೆ ಕೊಟ್ಟು ಶುಭಾಶಯವನ್ನು ತಿಳಿಸುತ್ತಾರೆ. ಮರಾಠಿ ಭಾಷೆ ಮಾತನಾಡುವ ಜನರು ಮಣ್ಣಿನ ಸಣ್ಣ ಸಣ್ಣ ಗಡಿಗೆಗಳಲ್ಲಿ ವೀಳ್ಯದೆಲೆ, ಅಡಿಕೆ, ಬಾಳೆಹಣ್ಣು, ಕಬ್ಬು, ಎಳ್ಳು, ಬೆಲ್ಲ, ಬಳೆ, ಕನ್ನಡಿ ಇಟ್ಟು ನೆರೆಮನೆಯ ಸ್ತ್ರೀಯರಿಗೆ ಕೊಟ್ಟು ಶುಭಾಶಯ ತಿಳಿಸುತ್ತಾರೆ.

ಪೊಂಗಲ್ ಎರಡನೆಯ ದಿನವು ವಾಯು ದೇವರಿಗೆ ಪೂಜೆ ಸಲ್ಲುತ್ತದೆ. ಈ ದಿನವನ್ನು ಕನ್ಯಾಪೊಂಗಲ್ ಎಂದೂ ಕರೆಯುತ್ತಾರೆ. ಕನ್ಯೆಯರು ಚೆನ್ನಾಗಿ ಅಲಂಕರಿಸಿಕೊಂಡು ವಿಧ ವಿಧದ ಪಕ್ವಾನ್ನ ತಯಾರಿಸುತ್ತಾರೆ. ಮೊಸರನ್ನ ಚಿತ್ರಾನ್ನ ಮೊದಲಾದ ತಿಂಡಿ ತಿನಸುಗಳನ್ನು ತೆಗೆದುಕೊಂಡು ನದೀತೀರ ಅಥವಾ ಕೆರೆ ದಡಕ್ಕೆ ಹೋಗುತ್ತಾರೆ. ಅಲ್ಲಿ ಅರಸಿನ ಎಲೆಯನ್ನು ಬಿಡಿಸಿ ಅದರಲ್ಲಿ ತಾವು ತಂದಿದ್ದ ಪಕ್ವಾನ್ನವನ್ನು ಬಡಿಸುತ್ತಾರೆ. ಜೊತೆಗೆ ಬಾಳೆಹಣ್ಣು, ಕಬ್ಬು, ವೀಳ್ಯ, ಅಡಿಕೆ ಇಟ್ಟು ಧೂಪದೀಪಗಳಿಂದ ನದೀ ದೇವತೆಗಳನ್ನು ಪೂಜಿಸುತ್ತಾರೆ. ಪಕ್ವಾನ್ನವನ್ನು ದೇವರಿಗೆ ನೈವೇದ್ಯ ಮಾಡುವರು. ಕನ್ಯೆಯರು ತಮ್ಮ ತಾಯಿಗೂ, ಸೊಸೆಯರು ತಮ್ಮ ಅತ್ತೆಗೂ ನಮಸ್ಕಾರ ಮಾಡಿ ಆಶೀರ್ವಾದ ಬೇಡುವರು. ಬಳಿಕ ಕಾಗೆ, ಮೀನುಗಳಿಗೆ ಈ ಆಹಾರವನ್ನು ತಿನ್ನಿಸುವರು. ಸಹೋದರರು ತಮ್ಮ ಅಕ್ಕ ತಂಗಿಯರಿಗೆ ಆಭರಣಗಳನ್ನು ಕೊಡುವರು. ನವದಂಪತಿಗಳನ್ನು ಈ ಸಂದರ್ಭದಲ್ಲಿ ಸನ್ಮಾನಿಸುವರು. ರೈತಕನ್ಯೆಯರು ಸಂಗಡ ಮಾಡಿಕೊಂಡು ತಮ್ಮ ಪರಿಚಿತರಲ್ಲಿಗೆ ಹೋಗಿ ನೃತ್ಯಮಾಡಿ ಹಾಡುವುರು, ಸಂತೋಷಪಡುವರು.

(38ನೇ ಪುಟ ನೋಡಿ)

**ಶ್ರೀ ಗಣಪತಿಭಟ್ಟ ಆರ್ತಿಕಜೆ**

## ಕಿಶೋರಜಗತ್

# ಸೊನ್ನೆ-ಬಿಂದು

ಬಿ. ಎ ಪಾಸು ಮಾಡಿದ ಮೊಮ್ಮಗಳಿಗೆ ಬಿ. ಇ. ಪಾಸು ಮಾಡಿದ ಇಂಜಿನಿಯರ್, ವರ ಸಿಕ್ಕಿ ಮದುವೆ ಗೊತ್ತಾದುದರಿಂದ ಅಜ್ಜಿಗೆ ಆನಂದ ಅಪಾರವಾಗಿತ್ತು.

ಆ ಸಂಭ್ರಮದಲ್ಲಿ ಮೊಮ್ಮಗಳ ಸಂಸಾರದ ಬಗ್ಗೆ ಆಸ್ಥೆ ವಹಿಸಿದ ಅಜ್ಜಿ ಕೇಳಿದಳು–

"ಮಗೂ, ಬೆಳಗಾಗ ಹೊತ್ತಿಗೆ ಮುಂಚೆ ಎದ್ದು ಮುಖವನ್ನು ತೊಳೆದ ಕೂಡಲೇ ಬೀದಿಯ ಬಾಗಿಲು ಸಾರಿಸಿ ರಂಗವಲ್ಲಿಯನ್ನು ಮರೆಯದೇ ಹಾಕು. ಅಂದ್ಹಾಗೇ ಎಷ್ಟು ಹಸೇ ಕಲ್ತಿದೀ? ಯಾವ್ಯಾವ ಚಿತ್ತಾರ ಬಿಡಸ್ತೀಯಾ?"

ಮೊಮ್ಮಗಳು ಹಾಹಾರಿ ಹೇಳಿದಳು–

"ಅಯ್ಯೋ ಅಜ್ಜಿ, ನಮಗೆ ಕಾಲೇಜಿನಲ್ಲಿ ರಂಗವಲ್ಲಿ ಹಾಕೋದೇ ಹೇಳ್ಕೊಡಲ್ಲವಲ್ಲಾ! ಏನ್ಮಾಡೋದಜ್ಜೀ"

ಅಜ್ಜಿ ಹೇಳಿದಳು–"ಅಯ್ಯೋ ಅದೊಂದು ಕಾಲೇಜು! ಬೇಕಾದ್ದನ್ನ ಮಾತ್ರ ಬಿಟ್ಟು ಬೇಡದ್ದು ಎಲ್ಲಾವನ್ನೂ ಕಲಿಸೋ ಸುಡಗಾಡು. ಬಾ ಇಲ್ಲಿ, ಆ ರಂಗೋಲಿ ಡಬ್ಬ ತಾ! ನಾ ಹೇಳ್ಕೊಡ್ತೀನಿ. ಅದೇನು ಕಷ್ಟದ ಕೆಲಸವೇ?"

ಅಜ್ಜಿ ಕೆಲ ಹೊತ್ತಿನಲ್ಲಿಯೇ ನಾನಾ ಬಗೆಯ ತರ ತರಹದ ಚಿತ್ತಾರವನ್ನು ಬಲು ಸುಲಭವಾಗಿ ಬಿಡಿಸಿದರು. ಮೊಮ್ಮಗಳಿಗೆ ಅದು ಬ್ರಹ್ಮ ವಿದ್ಯೆಯೇ ಎನಿಸಿ ಆಶ್ಚರ್ಯದಿಂದ ಕೇಳಿದಳು–

"ಅಜ್ಜಿ, ನೀನು ಎಷ್ಟು ಮಾದರಿ ಹಸೆ ಬರೆದಿದ್ದೀ ಆದರೆ, ಅದರಲ್ಲಿ ಎಲ್ಲಿಂದ ಆರಂಭಿಸಿ ಎಲ್ಲಿಗೆ ಮುಗಿಸಿದರೂ ಒಂದೇ ಕಡೆ ಸೇರುತ್ತಲ್ಲಾ ಅದೇನು ವಿಚಿತ್ರ? ಎಲ್ಲಾ ಹಸೇಗೂ ಮಧ್ಯೆ ಅದೇನು ಚುಕ್ಕೆ ಇಟ್ಟು ಅದರ ಸುತ್ತ ರೌಂಡು ಸುತ್ತುತೀಯಲ್ಲ!"

ಅಜ್ಜಿ ನಗುತ್ತಾ ಹೇಳಿದಳು–

"ಅದೇ ಕಣೇ ಮಗು, ಭಾರತ ದೇಶದ ಹೆಣ್ಣುಮಕ್ಕಳ ಹೆಚ್ಚುಗಾರಿಕೆ! 'ಸಂಗಡಗಳು ಎಷ್ಟೇ ಇರಲಿ ಜಾತಿ, ನೀತಿ ಯಾವುವೇ ಇರಲಿ. ದಾರಿಗಳು ಎಲ್ಲಿಂದೆಲ್ಲಿಗೇ ಹೋಗಲಿ, ಗುರಿಮಾತ್ರ ಒಂದೇ, ಅದೇ ಪ್ರಾರಂಭ, ಅದೇ ಕೊನೆ'–ಅನ್ನೋ ನಮ್ಮ ಸಂಸ್ಕೃತೀನಾ ನಾವು ಹೆಂಗಸರು ನಮ್ಮ ಎಲ್ಲ ಕೆಲಸದಲ್ಲೂ ಸೂಚ್ಯವಾಗಿ ತೋರಿಸುತ್ತೀವಿ ನೋಡು."

ಮಧ್ಯದ ಚುಕ್ಕಿಯೋ ಆ ಸೂತ್ರಧಾರಿ–ಪರಮಾತ್ಮ–ಕೇಂದ್ರ ಬಿಂದು. ಅದರ ಸುತ್ತ ಸುತ್ತು ಸೊನ್ನೆ ಪರಮಾತ್ಮನನ್ನು ಸುತ್ತಿಕೊಂಡು ಜಗತ್ತಿಗೆ ಪರಮಾತ್ಮನ ಪರಿಚಯ ಮಾಡಿಕೊಡೋ ಧರ್ಮ. ತಿಳಿಯಿತೇ?"

**ಪಾರ್ವತಿ ಕೃ. ನ. ಮೂರ್ತಿ**


## ಪ್ರಕಟನ ಶಾಖೆ

**ಶ್ರೀ ವೆಂಕಟೇಶ ಸಚಿತ್ರ ಸುಪ್ರಭಾತ** — ಬೆಲೆ: ೧೦-೦೦
(ತ್ರಿವರ್ಣಚಿತ್ರಸಹಿತ ಸ್ತೋತ್ರ ಪ್ರಪತ್ತಿ, ಮಂಗಳಾಶಾಸನಗಳ ವಿವರಣೆ)

**ಕಿಶೋರ ಭಾರತ - ಮೈ. ನ. ನಾಗರಾಜ** — ರಿಯಾಯಿತಿ ಬೆಲೆ: ೪-೦೦

**ಶ್ರೀಮದ್ಭಗವದ್ಗೀತಾ** (ಸರಳ ಕನ್ನಡಾನುವಾದದೊಂದಿಗೆ) — ರಿಯಾಯಿತಿ ಬೆಲೆ: ೨-೦೦

**ಶ್ರೀನಿವಾಸನ ಹಾಡುಗಳು - ಶ್ರೀ ಪುರಂದರದಾಸರು** — ಬೆಲೆ: ೩-೨೫

**ಶ್ರೀನಿವಾಸನ ಹಾಡುಗಳು – II** — ಬೆಲೆ: ೪-೫೦
( ಶ್ರೀಪಾದರಾಜ, ವ್ಯಾಸರಾಯ, ಕನಕದಾಸ, ವಾದಿರಾಜ ಕೃತ )

**ಆಚಾರಗಳು ಆಡಂಬರಗಳು** — ಬೆಲೆ: ೦-೪೦

**ಭಕ್ತ ಶ್ರೀ ಪುರಂದರದಾಸರು - ಕೆ. ಅಪ್ಪಣ್ಣಾಚಾರ್ಯ** — ಬೆಲೆ: ೦-೫೦

**ಶ್ರೀ ವ್ಯಾಸರಾಯರು - ಕೆ. ಅಪ್ಪಣ್ಣಾಚಾರ್ಯ** — ಬೆಲೆ: ೦-೪೦

**ಗೀತಾಸಾರೋದ್ಧಾರ** — ಬೆಲೆ: ೪-೦೦
( ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು )

ಅಂಚೆ ವೆಚ್ಚ ಪ್ರತ್ಯೇಕ.
ವಿ.ಪಿ.ಪಿ. ಇಲ್ಲ.

ವಿವರಗಳಿಗೆ:
**ಪಬ್ಲಿಕೇಷನ್ ಸೆಕ್ಷನ್,**
ಟಿ. ಟಿ. ಡಿ. ತಿರುಪತಿ.

# ವಿಶಿಷ್ಟ ಪಂಡರಿಭಜನೆ

ಕರ್ನಾಟಕದಲ್ಲಿ ಜಾನಪದ ಕಲೆ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಈ ಪೈಕಿ ಪಂಡರಿ ಭಜನೆಯೂ ಒಂದು. ಸಾಮಾನ್ಯವಾಗಿ ಪಾಂಡುರಂಗನ ಭಕ್ತರು ಪಂಡರಾಪುರಕ್ಕೆ ಹೋಗುವಾಗ ಪಾಂಡುರಂಗನ ಭಜನೆ ಮಾಡುತ್ತಾ ಹೋಗುವುದೇ 'ಪಂಡರಿ ಭಜನೆ'. ಇದೊಂದು ರೀತಿಯ ಗ್ರಾಮ ಕಲೆ.

ಕಾವಿ ಬಣ್ಣದ ಅಂಗಿ, ಬಿಳಿ ಚಲ್ಲಣ ತೊಟ್ಟು ತಲೆಗೆ ಟೋಪಿ ಇಟ್ಟು ಕೈಯಲ್ಲಿ ಒಂದು ಬಟ್ಟೆ ಹಿಡಿದು (ಬಾವುಟ) ವೃತ್ತಾಕಾರದಲ್ಲಿ ನೃತ್ಯ ಮಾಡುತ್ತಾ ಪಾಂಡುರಂಗನ ಭಜನೆ ಮಾಡುವುದು ಸಾಮಾನ್ಯ ರೂಢಿ.

ಆದರೆ ಕೋಲಾರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕಿನ ದೇವರಮಳ್ಳೂರಿನ ಶ್ರೀ ಕೋದಂಡ ರಾಮಸ್ವಾಮಿ ಭಜನ ಮಂಡಳಿಯವರು ಈ ಒಂದು ಕಲೆಗೆ ಹೊಸರೂಪ ನೀಡಿದ್ದಾರೆ. ಈ ಕಲೆಯನ್ನು ಬಹು ಶ್ರದ್ಧಾ ಭಕ್ತಿಯಿಂದ ಅಭ್ಯಾಸಮಾಡುತ್ತಾ ಬಂದಿದ್ದು ಬಹು ಆಕರ್ಷಣೀಯನ್ನಾಗಿಸಿದ್ದಾರೆ.

ಕೇವಲ 8 ರಿಂದ 11 ವಯೋಮಿತಿಯ ಗಂಡು ಮತ್ತು ಹೆಣ್ಣು ಮಕ್ಕಳು ಕಳೆದ 3 ವರ್ಷದಿಂದ ಈ ವಿನೂತನ ರೀತಿಯ ಪಂಡರಿ ಭಜನೆ ಹಾಗೂ ನೃತ್ಯ ಅಭ್ಯಾಸ ಮಾಡುತ್ತಾ ಬಂದಿದ್ದು, ಕೈಗಾಗಲೇ ಸಾಕಷ್ಟುಬಾರಿ ವಿವಿಧೆಡೆ ಆಕರ್ಷಕವಾಗಿ ಉತ್ತಮ ಪ್ರದರ್ಶನ ನೀಡಿದ್ದಾರೆ.

1980 ನೇ ಸಾಲಿನಲ್ಲಿ ಈ ಸಂಘದವರು ಗ್ರಾಮೀಣ ಕಲೆಯನ್ನು ಅಭಿವೃದ್ಧಿ ಪಡಿಸುವ ಉದ್ದೇಶದಿಂದ ಗ್ರಾಮ ಪಂಚಾಯಿತಿ ಅಧ್ಯಕ್ಷರಾದ ಶ್ರೀಯುತ ಎಂ. ಚಿಕ್ಕಪ್ಪನವರ ಅಧ್ಯಕ್ಷತೆಯಲ್ಲಿ ಭಜನೆ ಮಂಡಳಿ ರಚಿಸಿ, ಎ. ವೆಂಕೋಬರಾವ್ ರನ್ನು ಕಾರ್ಯದರ್ಶಿಗಳನ್ನಾಗಿಯೂ ಶ್ರೀ ಶೆಟ್ಟಿಳೃಪ್ಪನವರನ್ನು ಭಜನೆ ಕಲಿಸಲು ಗುರುಗಳನ್ನಾಗಿಯೂ, ಸಹ ವಾದ್ಯಗಳಿಗೆ ಹನುಮಂತರಾಯಪ್ಪ ಹಾರ್ಮೋನಿಯಂ, ನಾರಾಯಣಾಚಾರಿ – ತಬಲ, ವೆಂಕಟೇಶಪ್ಪ – ತಾಳ, ವಾದ್ಯಕರಾಗಿಯೂ, ಸಹಾಯಕ ಮತ್ತು ಪೋಷಕರನ್ನಾಗಿ ಎನ್. ಬಚ್ಚಪ್ಪ, ಪಾಪಣ್ಣ, ವೆಂಕಟೇಶಪ್ಪ ನವರನ್ನೂ ಆರಿಸಿಕೊಂಡರು. ವಿದ್ವಾನ್. ಎ. ವೆಂಕಟೇಶಮೂರ್ತಿ ಖಂಜಿರ ಬಾರಿಸುವರು.

ಮೇಲು ಕೀಳೆಂಬ ಭಾವನೆ ಇಲ್ಲದೆ ಸಹಕಾರ ಮನೋಭಾವದಿಂದ ಹಬ್ಬ ಹರಿದಿನಗಳಂದು ಶಿಸ್ತು, ಭಕ್ತಿಯಿಂದ ಜಂಡಾ, ಕೋಲಾಟ, ಸಾಲುಕಳಸ, ಚಕ್ಕೆ ಮೇಲೆ ಕಳಸ ಕುಣಿತದೊಂದಿಗೆ ಸಾರ್ವಜನಿಕರಿಗೆ ಸಂತೋಷ ಮತ್ತು ಆನಂದವನ್ನೀಯುವುದರೊಂದಿಗೆ ಭಕ್ತಿಯ ಅಲೆಗಳಲ್ಲಿ ಓಲಾಡುವಂತೆ ಮಾಡುತ್ತಾರೆ.

ಶ್ರೀ ಬಿ. ವಿ. ನರಸಿಂಹ ಮೂರ್ತಿ



ಚಕ್ಕೆ ಕಳಸ ನೃತ್ಯ – ಚಿತ್ರ ಜಿ. ಸೋಮಶೇಖರ್



ಸಾಲು ಕಳಸ ನೃತ್ಯ – ಚಿತ್ರ : ಜಿ. ಸೋಮಶೇಖರ್

ಈ ಸಂಘದಲ್ಲಿ 40 ಮಂದಿ ಬಾಲಕ ಬಾಲಕಿಯರಿದ್ದು. ಶ್ರೀಕೃಷ್ಣನ ಬಾಲ ಲೀಲೆಗಳನ್ನು ಪ್ರದರ್ಶಿಸುತ್ತಾರೆ. ಇವರು ಕಲಿತಿರುವ ವಿವಿಧ ಭಜನೆಗಳನ್ನು ಹಾಡಿ ನೃತ್ಯಮಾಡಲು ಸುಮಾರು 8 ಘಂಟೆ ಕಾಲಾವಕಾಶ ಬೇಕಿದ್ದು ಪ್ರಸ್ತುತ ಎರಡು ಗಂಟೆ ಅವಧಿಗೆ ಅಳವಡಿಸಿಕೊಳ್ಳಲಾಗಿದೆ. ಸಾಮಾನ್ಯವಾಗಿ ಎಲ್ಲೆಡೆ ಪಂಡರಿಭಜನೆ ತೆಲುಗಿನಲ್ಲಿದ್ದು ಇವರು ಕನ್ನಡ ಭಾಷೆಗೆ ಹೊಂದಿಸಿ ಕೊಂಡಿರುವುದು ವಿಶೇಷವಾಗಿದೆ.

ಪ್ರಪ್ರಥಮವಾಗಿ ಗಣಪತಿ ಪ್ರಾರ್ಥನೆಯೊಂದಿಗೆ ಭಜನೆ ನೃತ್ಯ ಆರಂಭಿಸುವ ಈ ತಂಡ ಗುರು ನಮಸ್ಕಾರ, ಶಾರದಾ ದೇವಿಗೆ ನಮನ. ನಂತರ ಜಂಡಾ ಕುಣಿತ, ಕೋಲಾಟ ಸಾಲುಕಳಸ, ಕಡೆಗೆ ಚಕ್ಕೆಕಳಸದೊಂದಿಗೆ ಶ್ರೀಕೃಷ್ಣಲೀಲೆ ಅಭಿನಯಿಸುವರು.

ಶಿಡ್ಲಘಟದಲ್ಲಿ ಯುವಜನ ಮೇಳದಲ್ಲಿ ಪ್ರಪ್ರಥಮವಾಗಿ ಭಾಗವಹಿಸಿದ ಇವರು, ಸ್ವಂತ ಗ್ರಾಮದಲ್ಲಿ, ಶ್ರೀ ಮಳ್ಳಾರಂಭಾರ ಉತ್ಸವ, ದಸರಾ ವಸ್ತುಪ್ರದರ್ಶನಗಳಲ್ಲಿ ಅನೇಕಬಾರಿ ಪ್ರದರ್ಶನ ನೀಡಿ ಮೆಚ್ಚಿಗೆ ಗಳಿಸಿದ್ದಾರೆ.

1980 ರಲ್ಲಿ ಮೊದಲಿಗೆ ಜಿಲ್ಲಾ ಯುವಜನ ಸೇವಾಧಿಕಾರಿ ಎ. ಎಲ್. ರಾಮರಾಯರು ಈ ಕಲೆಯನ್ನು ಗುರ್ತಿಸಿ ಆ ಬಾರಿ ಮೈಸೂರಿನ ದಸರಾ ವಸ್ತುಪ್ರದರ್ಶನದಲ್ಲಿ 'ಜಿಲ್ಲೆಯ ಸಾಂಸ್ಕೃತಿಕದಿನ' ದಂದು ಬೆಳಕಿಗೆ ತಂದ ಈ ತಂಡವು ಇದೇ 14 ರಂದು ಪ್ರಾಚ್ಯ ವಸ್ತು ಇಲಾಖೆಯವರು ಏರ್ಪಡಿಸಿದ್ದ ಕಾರ್ಯಕ್ರಮದಡಿ ಮೈಸೂರು ಅರಮನೆ ಅಂಗಳದಲ್ಲ ಈ ಪಂಡರಿ ಭಜನೆ ನೃತ್ಯ ಅಭಿನಯಿಸಿ ಹತ್ತು ಸಹಸ್ರಕ್ಕೂ ಹೆಚ್ಚಿನ ಪ್ರೇಕ್ಷಕ ವರ್ಗವನ್ನು ರಂಜಿಸಿತು.

ಸುಮಾರು 45 ನಿಮಿಷ ಅಂದರೆ 8 ರಿಂದ 8-45 ರ ವರೆಗೆ ಈ ತಂಡಕ್ಕೆ ಕಲಾ ಪ್ರದರ್ಶನಕ್ಕೆ ಅವಕಾಶ ನೀಡಿದ್ದ ಅಧಿಕಾರಿಗಳು ಈ ಬಾಲೆಯರ ಆಕರ್ಷಕ ನೃತ್ಯದಿಂದ ಬೆರಗಾಗಿ ಮತ್ತೆ 30 ನಿಮಿಷ ಕಾಲಾವಧಿ ಹೆಚ್ಚಿಸಿ ಪ್ರೇಕ್ಷಕರನ್ನೂ ತಣಿಸಿದರಲ್ಲದೆ ತಂಡದವರಿಗೆ 1500 ರೂಗಳ ಗೌರವಧನ ಹಾಗೂ ಪ್ರಶಸ್ತಿ ಪತ್ರ ನೀಡಿ ಗೌರವಿಸಿದರು.

ಕಾಂತಮ್ಮ, ಕಮಲಮ್ಮ, ವೆಂಕಟಲಕ್ಷ್ಮಿ, ಪದ್ಮ, ಭಾಗ್ಯ, ಗಿರಿಜ, ಸುವರ್ಣ, ಮುದ್ದುಲಕ್ಷ್ಮಿ, ಸುಗುಣ, ತಾಯಮ್ಮ, ಲಕ್ಷ್ಮೀದೇವಿ, ಭಾಗ್ಯಮ್ಮ, ನಾಗರತ್ನಮ್ಮ, ಎಸ್. ಮನೋಹರರವರುಗಳು ಅಭಿನಯಿಸಿದ ಈ ಪಂಡರಿಭಜನೆ ನೃತ್ಯ ಪ್ರದರ್ಶನಕ್ಕೆ ಎನ್. ಬುಜ್ಜಣ್ಣ, ವೆಂಕಟೇಶಪ್ಪ, ಮತ್ತು ಪಾಪಣ್ಣ ರೂಪಾಲಂಕಾರದ ಹೊಣೆಯನ್ನೂ ಬಹಳ ಅಚ್ಚುಕಟ್ಟಾಗಿ ನಿರ್ವಹಿಸಿದ್ದರು.

ಈ ಪಂಡರಿ ಭಜನೆ ತಂಡ ಎಲ್ಲಿಗೇ ಹೋಗಲಿ ಮಂಡಳಿಯೊಡನೆ ಕಾರ್ಯದರ್ಶಿ ಎ. ವೆಂಕೋಬರಾವ್, ಕೆ. ಸತ್ಯನಾರಾಯಣ ಇರಲೇ ಬೇಕು. ಇವರ ಮಾರ್ಗದರ್ಶನ ಅವರಿಗೆ ಎರಡು ಕಣ್ಣುಗಳಿದ್ದಂತೆಂದರೆ ತಪ್ಪಲ್ಲ.

ಈ ನೃತ್ಯದ ವೇಳೆಯಲ್ಲಿ ಬಾಲೆಯರು ಹೊರುವ ಕಳಸಗಳ ತೂಕ 2 ರಿಂದ 2.5 ಕಿಲೋವರೆಗೆ ಇರುತ್ತದೆ. ಯಾವುದೇ ಆಧಾರವಿಲ್ಲದೆ ತಲೆಯ ಮೇಲೆ ಹೊರುವ ಕಳಸಗಳನ್ನೂ ಕೈಯಿಂದ ಮುಟ್ಟದೆಯೇ ಗಂಟೆಗಟ್ಟಲೆ ನೃತ್ಯ ಮಾಡುವ ಬಾಲೆಯರು ವಿವಿಧ ಭಾವ ಭಂಗಿಗಳನ್ನು ನಿರಾಂತಂಕವಾಗಿ ಪ್ರದರ್ಶಿಸುತ್ತಾರೆ.

ತಮ್ಮ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಾದ ಶಿಡ್ಲಘಟ್ಟ ಮತ್ತು ಕೋಲಾರಗಳಲ್ಲಿ ಅನೇಕ ಪ್ರದರ್ಶನ ನೀಡಿರುವ ಈ ತಂಡವು ಬೆಂಗಳೂರಿನ ಲಾಲ್ ಬಾಗ್ ಗಾಜಿನ ಮನೆಯಲ್ಲಿ ಲಯನ್ಸ್ ಕ್ಲಬ್ ಸಮಾರಂಭದಲ್ಲಿಯೂ ಹಿಮ್ಮ ಪ್ರದರ್ಶನ ನೀಡಿದ್ದಾರೆ.

ಕಲಾರಾಧಕರಾದ ಈ ತಂಡಕ್ಕೆ ಯಾವುದೇ ರೀತಿಯ ವಿಶೇಷ ಪ್ರೋತ್ಸಾಹ ಆಗತ್ಯವಾಗಿದ್ದು ಇವರಿಂದ ಇನ್ನೂ ಹೆಚ್ಚಿನ ಕಲಾ ಸೇವೆ ನಿರೀಕ್ಷಿಸಬಹುದಾಗಿದೆ.

(18 ನೇ ಪುಟದಿಂದ)

“ದಾಸೋಹಂ”, “ದಾಸ ದಾಸೋಹಂ” ಎಂಬ ಭಾವ ಹೊಂದಿ ಅಂಜನೇಯನಂತೆ ಆಗಬೇಕು, ಈ ವಿಧವಾದ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಲು ಸಹಕಾರಿಯಾಗಿರುವುದು ಭರತ ಲಕ್ಷ್ಮಣ ಶತ್ರುಘ್ನ ಅಂಜನೇಯಾದಿಗಳು. ಅವರೋ ಮೂರ್ತಿಮತ್ತಾದ ಸೇವಾವಿಧಾನಗಳು, ಭಕ್ತಿ ಪ್ರಪತ್ತಿಯ ವಿಗ್ರಹಗಳು, ಉಪನಿಷತ್ತುಗಳು ಭಗವಂತನನ್ನು “ರಸೋ ವೈ ಸಃ”, “ಸಚ್ಚಿದಾನಂದರೂಪಕ”, ‘ಅಣೋರಣೀಯಾನ್ ಮಹತೋ ಮಹೀಯಾನ್’, “ಸರ್ವವ್ಯಾಪೀ, ಸರ್ವಶಕ್ತ, ಸರ್ವತ್ರ ವರ್ತತೇ” “ತೇನ ವಿನಾ ತೃಣಮಪಿ ನ ಚಲತಿ”, “ಸ್ವರೂಪ ರೂಪಗುಣ, ವಿಭವೈಶ್ವರ್ಯಾದಿ ಸಂಪನ್ನ !” ಇತ್ಯಾದಿ ಇತ್ಯಾದಿಯಾಗಿ ವರ್ಣಿಸಿ, ಅವನು “ಭಕ್ತಿ ಪ್ರಪತ್ತಿಭ್ಯಾಂ ವಶ್ಯ” ಎಂದು ಹೇಳಿ, “ಆತ್ಮದಾಸ್ಯಂ ಹರೇಃ ಸ್ವಾಮ್ಯಂ” ಎಂಬುದೇ ಚೇತನನಿಗೆ ಉದ್ಧಾರವಾಗುವುದಕ್ಕೆ ಮಾರ್ಗವೆಂದು ಒತ್ತಿ ಹೇಳಿವೆ. ಈ ಎಲ್ಲಾ ಭಾವನೆಗಳೂ ಶ್ರೀಮದ್ರಾಮಾಯಣದಲ್ಲಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನ, ಅಂಜನೇಯಾದಿರೂಪಗಳಾಗಿ ನಿರೂಪವಾಗಿ “ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ ! ವೇದಃ ಪ್ರಾಚೇತಸಾದಾಸೀತ್ ಸಾಕ್ಷಾತ್ ರಾಮಾಯಣಾತ್ಮನಾ” ಎನ್ನಿಸಿದೆ. ಸಾತ್ವಿಕ ಹಂಬಲವು ಜೀವನ ಮನಸ್ಸಿನಲ್ಲಿ ನೆಲೆಯಾದಾಗ ರಾಮ ಕಲ್ಪದ್ರುಮವು ಸಕಲಾಭೀಷ್ಟಗಳನ್ನೂ ಕರುಣಿಸುವುದು.

ಭಗವಂತನ ಸಾಕ್ಷಾತ್ಕಾರ ಹೇಗೆ, ನಮ್ಮ ಅಭೀಷ್ಟಸಿದ್ಧಿ ಹೇಗೆ ಎಂಬುದನ್ನು ಈ ಧ್ಯಾನ ಶ್ಲೋಕ ಸೂಚಿಸುತ್ತದೆ. “ರಾಮಂ ಭಜೇ ಶ್ಯಾಮಲಂ”. ಶ್ಯಾಮಲ ವರ್ಣ ನೀಲಮೇಘ ಸೂಚಕ. ಬಿಸಿಲಿನಿಂದ ಒಣಗಿದ ಜಗತ್ತಿಗೆ ಜಲಹೊತ್ತ ನೀಲಮೇಘಗಳು ಹೇಗೆ ಆಶಾದಾಯಕವೋ ಅಪೇಕ್ಷಣೀಯವೋ ಹಾಗೆ ಸಂಸಾರಾರ್ತರಾದ ಜೀವಿಗಳಿಗೆ ಶ್ಯಾಮಲನಾದ ರಾಮ. ಇವನಂತೂ ಬರೀ ರಾಮನಾಗಬಾರದು. ವೈದೇಹೀ ಸಹಿತನಾದ ರಾಮನಾಗಬೇಕು, ಪರಮ ಪದದಲ್ಲಿ ನಾವು ಸೇವಿಸುವುದು ಬರೀ ನಾರಾಯಣನನ್ನಲ್ಲ, ಶ್ರೀಮನ್ನಾರಾಯಣನನ್ನು, ಲಕ್ಷ್ಮೀನಾರಾಯಣನನ್ನು. ಶ್ರೀಮಾನ್ ಆಗಿದ್ದರೆ ಮಾತ್ರ ನಾರಾಯಣ ಶ್ರೀಘ್ರಫಲಪ್ರದ. ಶ್ರೀಮನ್ನಾರಾಯಣನೇ ಪರತತ್ತ್ವ, ಸಕಲ ಚರಾಚರ ಜಗತ್ತಿಗೂ, ಸೃಷ್ಟಿಸ್ಥಿತಿಲಯಗಳಿಗೂ ಆದಿಕಾರಣ, ಅವನು ಸಚ್ಚಿದಾನಂದ ಸ್ವರೂಪ. ಅಂತಹ ವೈದೇಹೀ ಸಹಿತನಾದ ಶ್ರೀರಾಮನ ಅನುಗ್ರಹವು ಅವನ ಭಜಕರಾದ ನಮ್ಮ ಮೇಲೆ ಸತತವಾಗಿರಲಿ. ★



# ಗೃಹಲಕ್ಷ್ಮಿ





# ಸತೀ ಸಾವಿತ್ರೀ

ಭಾರತದಲ್ಲಿ ಹಲವು ಮಂದಿ ಸತಿವ್ರತಾ ಸ್ತ್ರೀಯರು ಜನ್ಮವೆತ್ತಿ ತಮ್ಮ ಪಾತಿವ್ರತ್ಯದ ಪ್ರಭಾವದಿಂದ ಇಹಪರಗಳೆರಡರಲ್ಲೂ ಕೀರ್ತಿಯನ್ನು ಗಳಿಸಿದ್ದಾರೆ. ಅಂತಹವರಲ್ಲಿ ತನ್ನ ಅಸಾಮಾನ್ಯವಾದ ತೇಜಸ್ಸಿನ ಬಲದಿಂದ ಸತ್ತ ಗಂಡನನ್ನೂ ಬದುಕಿಸಿಕೊಂಡ ಸಾವಿತ್ರೀದೇವಿಯ ಜೀವನ ಚರಿತ್ರೆಯು ಇಂದಿನ ನಾರಿಯರಿಗೆ ಆದರ್ಶ ಪ್ರಾಯವಾದುದು.

ಮದ್ರದೇಶದ ರಾಜನಾದ ಅಶ್ವಪತಿಗೆ ಮಾಳವಿ ಎಂಬ ಪತ್ನಿಯಿದ್ದಳು. ಈ ದಂಪತಿಗಳಿಗೆ ಬಹುಕಾಲದವರೆಗೆ ಮಕ್ಕಳಾಗಲಿಲ್ಲ. ಮಕ್ಕಳನ್ನು ಪಡೆಯಲು ಆ ದಂಪತಿಗಳು ಸಾವಿತ್ರೀದೇವಿಯ ವ್ರತವನ್ನು ಹದಿನೆಂಟು ವರ್ಷಗಳ ಕಾಲ ಎಡೆಬಿಡದೆ ಮಾಡಿದರು. ಆಗ ದೇವಿಯು ಅವರಿಗೆ ಪ್ರಸನ್ನಳಾಗಿ ತೇಜಸ್ಸಿನಿಂದ ಕೂಡಿದ ಹೆಣ್ಣು ಮಗುವೊಂದನ್ನು ಕರುಣಿಸಿದಳು. ಸಾವಿತ್ರೀ ದೇವಿಯ ವ್ರತದಿಂದ ಜನಿಸಿದ ಮಗುವಿಗೆ "ಸಾವಿತ್ರಿ" ಎಂದೇ ಹೆಸರಿಟ್ಟರು.

ಸಾವಿತ್ರಿಯು ವಿನಯಶೀಲೆಯೂ, ಸದ್ಗುಣ ಸಂಪನ್ನೆಯೂ, ಆಗಿದ್ದು ದೇವಕನ್ಯೆಯಂತೆ ಶೋಭಿಸುತ್ತಿದ್ದಳು. ದಿನದಿಂದ ದಿನಕ್ಕೆ ಹುಣ್ಣಿಮೆಯ ಚಂದ್ರನಂತೆ ಬೆಳೆದು ಮದುವೆಗೆ ಸಿದ್ಧಳಾದಳು. ಅನೇಕ ಮಂದಿ ಶೂರರೂ, ಧೀರರೂ ಅವಳನ್ನು ಮದುವೆಯಾಗಲು ಮುಂದಾದರು. ಆದರೆ ವಿಧಿ ವಿಲಾಸ ಬೇರೆಯೇ ಆಗಿತ್ತು.

ಅಶ್ವಪತಿಗೆ ತನ್ನ ಮುದ್ದಿನ ಮಗಳಲ್ಲಿ ತುಂಬಾ ಮಮತೆ. ಅವನು ಮಗಳನ್ನು ಕರೆದು 'ಮಗೂ, ಸಾವಿತ್ರೀ, ನಿನಗೆ ಮದುವೆಯ ವಯಸ್ಸಾಯಿತು. ರಾಜಕುಮಾರರು ಹಲವು ಮಂದಿ ಕಾದು ನಿಂತಿದ್ದಾರೆ. ಅನುರೂಪನಾದ ವರನನ್ನು ನೀನೇ ಆರಿಸಿಕೊ' ಎಂದು ಹೇಳಿದನು. ಆದರೆ ಅವರಾರೂ ಮನಸ್ಸಿಗೆ ಬಾರದ್ದರಿಂದ ಸಾವಿತ್ರಿಯು ತನ್ನ ತಾಯಿ ತಂದೆಯರ ಆಶೀರ್ವಾದ ಪಡೆದು ಸಖಿಯರೊಂದಿಗೆ ಅಶ್ವಾರೂಢಳಾಗಿ ವರಶೋಧನೆಗೆ ಹೊರಟಳು. ಹಲವಾರು ಊರುಗಳನ್ನು ಸುತ್ತಿದಳು. ತನಗೆ ಯೋಗ್ಯನಾದ ಯುವಕನು ದೊರೆಯದೆ ಬೇಸರದಿಂದ ತನ್ನ ರಾಜಧಾನಿಗೆ ಹಿಂತಿರುಗುತ್ತಿದ್ದಳು. ಆಗ ಒಂದು ಕಾಡಿನ ಮಧ್ಯದಲ್ಲಿ ವೃದ್ಧ ದಂಪತಿಗಳಿಬ್ಬರು ಕುಳಿತಿರುವುದನ್ನು ಕಂಡಳು. ಅಷ್ಟರಲ್ಲೇ ಓರ್ವ ಸುಂದರ ಯುವಕನು ಅವರಿಗೆ ಹಣ್ಣುಗಳನ್ನು ಸುಲಿದುಕೊಟ್ಟನು. ಅವನು ಸಾವಿತ್ರಿಯ ಮನಸೆಳೆದನು. ವೃದ್ಧನು ದ್ಯುಮತ್ಸೇನ ಮಹಾರಾಜನಾಗಿದ್ದನು.



ಸಾವಿತ್ರೀದೇವಿ

ಅವನು ಕುರುಡನಾಗಿದ್ದು ರಾಜ್ಯವನ್ನು ಕಳೆದುಕೊಂಡು ಕಾಡಿನಲ್ಲಿ ವಾಸಮಾಡಿಕೊಂಡಿದ್ದನು. ಯುವಕ ಸತ್ಯವಾನನಾಗಿದ್ದನು. ಆ ಯುವಕನೂ ಮೊದಲನೋಟದಲ್ಲಿಯೇ ಸಾವಿತ್ರಿಯಿಂದ ಸೆಳೆಯಲ್ಪಟ್ಟನು. ಸಾವಿತ್ರಿಯು "ಈತನೇ ನನ್ನ ಪತಿಯಾಗಲಿ" ಎಂದು ಮನದಲ್ಲೇ ವಂದಿಸಿ ತನ್ನ ತಂದೆಯ ಅರಮನೆಗೆ ಹಿಂತಿರುಗಿದಳು.

ಅವಳು ಅರಮನೆಗೆ ಹಿಂತಿರುಗುವ ಹೊತ್ತಿಗೆ ಮಹರ್ಷಿಗಳೂ, ತ್ರಿಲೋಕ ಜ್ಞಾನಿಗಳೂ ಆದ ನಾರದರು ಬಂದಿದ್ದರು. ಸಾವಿತ್ರಿಯು ನಾರದರಿಗೂ, ತಂದೆಯವರಿಗೂ ವಂದಿಸಿ ಎಲ್ಲಾ ವಿಚಾರಗಳನ್ನು ತಿಳಿಸಿದಳು. ಅಶ್ವಪತಿಯು ನಾರದರಲ್ಲಿ ಸತ್ಯವಾನನ ಗುಣದೋಷಗಳನ್ನು ತಿಳಿಸುವಂತೆ ಹೇಳಿದರು. ಎಲ್ಲವನ್ನೂ ಬಲ್ಲ ನಾರದರು "ಅಶ್ವಪತಿ, ನಿನ್ನ ಮಗಳು ಯೋಗ್ಯ ವರನನ್ನೇ ಆರಿಸಿದ್ದಾಳೆ. ಸತ್ಯವಾನನು ಸತ್ಯಸಂಧನೂ, ರೂಪವಂತನೂ, ತೇಜೋವಂತನೂ ಆಗಿದ್ದಾನೆ. ಆದರೆ ಈತನ

ಶ್ರೀಮತಿ ವಿಶಾಲಾಕ್ಷಿ ಕೆ. ಭಟ್

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | ಪ್ರಾ 7–30 | ಪ್ರಾ 8–30 |
| *ಅಭಿಷೇಕ ಸಮರ್ಪಣ | | | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಆಯುಸ್ಸು ಮಾತ್ರ ಬಹಳ ಕಡಿಮೆ. ಇಂದಿಗೆ ಒಂದು ವರ್ಷಕ್ಕೆ ಸರಿಯಾಗಿ ಇವನ ಆಯುಸ್ಸು ಮುಗಿಯುತ್ತದೆ" ಎಂದು ಗಂಭೀರವದನರಾಗಿ ತಿಳಿಸಿದರು. ಇದರಿಂದ ಬೇಸರಗೊಂಡ ರಾಜನು ಮಗಳನ್ನು ಕರೆದು 'ಮಗೂ, ಸತ್ಯವಾನನು ಅಲ್ಪಾಯುವೆಂದು ನಾರದರಿಂದ ತಿಳಿದು ಬಂತು. ಅವರ ಮಾತು ಸುಳ್ಳಾಗದು. ಆದುದರಿಂದ ಅವನ ಗೊಡವೆ ಬಿಡು. ಬೇರೆ ವರನನ್ನು ಹುಡುಕು' ಎಂದನು. ಆಗ ಸಾವಿತ್ರಿಯು 'ಅಪ್ಪಾ, ಸತ್ಯವಾನನನ್ನು ನಾನು ಮನಸಾರೆ ವರಿಸಿದ್ದೇನೆ. ಅವನು ಅಲ್ಪಾಯುವಾದರೂ, ದೀರ್ಘಾಯುವಾದರೂ ಅವನೇ ನನಗೆ ತಕ್ಕವನು. ಅವನನ್ನು ಬಿಟ್ಟು ಇನ್ನಾರನ್ನೂ ಕಣ್ಣೆತ್ತಿಯೂ ನೋಡಲಾರೆ" ಎಂದು ತನ್ನ ದೃಢನಿರ್ಧಾರವನ್ನು ತಿಳಿಸಿದಳು.

ಮಗಳ ಮನಸ್ಸನ್ನು ನೋಯಿಸಲು ಇಷ್ಟಪಡದ ತಂದೆ ಮುಂದಿನ ಕಾರ್ಯಕ್ಕೆ ತೊಡಗಿದನು. ಒಂದು ಶುಭ ಮುಹೂರ್ತದಲ್ಲಿ ದ್ಯುಮತ್ಸೇನನನ್ನೂ ಕೂಡಿಕೊಂಡು ಅಶ್ವಪತಿಯು ಸಾವಿತ್ರಿಯನ್ನು ಸತ್ಯವಾನನಿಗೆ ಧಾರೆ ಎರೆದುಕೊಟ್ಟನು. ತಾನು ಮೆಚ್ಚಿದ ಪತಿ ದೊರೆತದ್ದು ಸಾವಿತ್ರಿಗೆ ಸಂತೋಷವಾದರೆ ರೂಪಗುಣಸಂಪನ್ನೆಯಾದ ಮಡದಿ ಸಿಕ್ಕಿದುದು ಸತ್ಯವಾನನಿಗೆ ಹಿಗ್ಗು. ಹದಿನೆಂಟು ವರ್ಷದ ತಪಸ್ಸಿನ ಪ್ರಭಾವದಿಂದ ಜನಿಸಿದ ಪ್ರೇಮದ ಕುವರಿಯನ್ನು ಅಗಲುವಾಗ ಅಶ್ವಪತಿಗೆ ಹೃದಯ ತುಂಬಿಬಂದಿತು.

ಸಾವಿತ್ರಿಯು ಆಭರಣಗಳನ್ನು ಕಳಚಿಟ್ಟು ನಾರುಮಡಿಯನ್ನುಟ್ಟು ಅತ್ತೆ ಮಾವಂದಿರ ಸೇವೆ ಮಾಡಲಾರಂಭಿಸಿದಳು. ಸತ್ಯವಾನನ ಪ್ರೇಮದ ಮಡದಿಯಾದಳು. ಎಲ್ಲರ ಪ್ರೀತಿಗೂ ಪಾತ್ರಳಾದಳು. ಆದರೆ ಮನದಲ್ಲಿ ನಾರದರ ಒಂದು ಮಾತು– "ಈತನು ಅಲ್ಪಾಯು" ಎನ್ನುವುದು ಮರೆಯಲಾರದ ದುಃಖವಾಗಿತ್ತು. ಎಷ್ಟೇ ಬೇಸರವಿದ್ದರೂ ಯಾರಿಗೂ ಅದನ್ನು ತೋರಿಸುತ್ತಿರಲಿಲ್ಲ. ತಾಳ್ಮೆಯಿಂದ ಸಹಿಸುತ್ತಿದ್ದಳು.

ಸಾವಿತ್ರಿಯು ದಿನಗಳನ್ನೆಣಿಸತೊಡಗಿದಳು. ಕಾಲ ಚಕ್ರ ಉರುಳಿತು. ನಾರ

ದಗು ಹೇಳಿದ ಒಂದು ವರ್ಷಕ್ಕೆ ಇನ್ನು ನಾಲ್ಕೇ ದಿನಗಳು ಉಳಿದಿದ್ದುವು. ತನ್ನ ಪ್ರಿಯತಮನ ಆಯುಸ್ಸು ಮುಗಿಯುತ್ತಾ ಬಂದಿತೆಂಬುದನ್ನು ತಿಳಿದ ಸಾವಿತ್ರಿಯು ಅನ್ನ ನೀರನ್ನು ಬಿಟ್ಟು ಕಠಿಣವಾದ ವ್ರತವನ್ನು ಕೈಕೊಂಡಳು. ತನ್ನ ತಂದೆಗೆ ಒಲಿದ ಸಾವಿತ್ರೀದೇವಿಯ ವ್ರತವನ್ನು ಮೂರು ದಿನ ಬಿಡದೆ ಮಾಡಿದಳು. ಮಾಂಗಲ್ಯ ಭಾಗ್ಯವನ್ನು ಕಾಪಾಡುವ ಸಲುವಾಗಿ ಹಗಲು ರಾತ್ರಿ ದೇವರ ಪೂಜೆಗಳಲ್ಲಿ ನಿರತಳಾದಳು. "ಆದಿನ ಬಂದೇ ಬಿಟ್ಟಿತು". ಸಾವಿತ್ರಿಯ ಮನದ ತಳಮಳ ಹೇಳತೀರದು. ಆದರೂ ಅತ್ತೆ ಮಾವಂದಿರ ಸೇವೆ ಮಾಡಿ ಅವರಿಂದ "ದೀರ್ಘ ಸುಮಂಗಲೀಭವ" ಎನ್ನುವ ಆಶೀರ್ವಾದವನ್ನು ಪಡೆದಾಗ ಅವರ ಆಶೀರ್ವಾದ ನಿಜವಾಗಲಿ ಎಂದು ಬಯಸುತ್ತಿದ್ದಳು.

ಆ ದಿನ ಸತ್ಯವಾನನು ನಿತ್ಯವಿಧಿಯಂತೆ ಕಟ್ಟಿಗೆ ತರುವುದಕ್ಕಾಗಿ ಕಾಡಿಗೆ ಹೊರಟನು. ಸಾವಿತ್ರಿಯೂ ಗಂಡನನ್ನು ಬಿಟ್ಟಿರಲಾರದೆ "ನಾನೂ ಕಾಡಿಗೆ ನಿಮ್ಮ ಜೊತೆ ಬರುವೆ" ಎಂದಳು. ಸತ್ಯವಾನನು ಆಶ್ಚರ್ಯದಿಂದ "ಪ್ರಿಯೆ, ಮೂರು ದಿನಗಳ ವ್ರತದಿಂದ ನೀನು ತುಂಬಾ ಬಳಲಿದ್ದೀಯೆ. ತುಂಬಾ ಕಷ್ಟದ ದಾರಿ. ನಿನ್ನ ವ್ರತ ಮುಗಿದ ಮೇಲೆ ಬರುವೆಯಂತೆ" ಎಂದನು. "ಪ್ರಾಣೇಶ್ವರಾ, ನೀವು ಜೊತೆಯಲ್ಲಿರುವಾಗ ನನ್ನ ಕಷ್ಟ ಆಯಾಸಗಳೆಲ್ಲಾ ಪರಿಹಾರವಾದಂತೆ. ಬೇಡ ಎನ್ನಬೇಡಿ, ಇಂದು ಬಂದೇ ಬರುತ್ತೇನೆ" ಎಂದು ಹಟ ಹಿಡಿದಳು. 'ಆಗಲಿ, ನಿನ್ನ ಸಂತೋಷವೇ ನನ್ನ ಸಂತೋಷ. ಅತ್ತೆ ಮಾವಂದಿರ ಆಶೀರ್ವಾದ ಪಡೆದು ಹೊರಡು' ಎಂದು ಸತ್ಯವಾನನು ಹೇಳಿದನು.

ಅದರಂತೆ ಅತ್ತೆಮಾವಂದಿರ ಆಶೀರ್ವಾದ ಪಡೆದು ಮುಂದೆ ಬರಬಹುದಾದ, ತನ್ನ ಗಂಡನ ಸಾವನ್ನು ನೆನೆದು ಭಯದಿಂದ ಗಂಡನೊಂದಿಗೆ ಸಾವಿತ್ರಿಯು ಕಾಡಿಗೆ ಹೊರಟಳು. ಸಾವಿತ್ರಿಯೂ ಜೊತೆಗಿರುವುದರಿಂದ ಸತ್ಯವಾನನು ಅತ್ಯಂತ ಸಂತೋಷದಿಂದ ಕಾಡಿನ ಸೌಂದರ್ಯವನ್ನು ಪತ್ನಿಗೆ ವಿವರಿಸುತ್ತಾ ಹೆಜ್ಜೆ ಇಡುತ್ತಿದ್ದನು. ಮುಂದೆ ಹೋಗಿ ಒಂದು ಮರದ ನೆರಳಲ್ಲಿ ಆಕೆಯನ್ನು ಕುಳ್ಳಿರಿಸಿ ತಾನು ಸೌದೆ ಕಡಿಯುವುದಕ್ಕಾಗಿ ಮರವನ್ನೇರಿದನು. ಸಾವಿತ್ರಿಯು ಗಂಡನನ್ನು ಎವೆಯಿಕ್ಕದೆ ನೋಡುತ್ತಿದ್ದಳು. "ನಾರದರು ಹೇಳಿದ ಗಳಿಗೆ ಬಂದೇ ಬಿಟ್ಟಿತು"; ಎಂದು ಅವಳ ಮನಸ್ಸು ಸಂಕಟದಿಂದ, ಭಯದಿಂದ ನಡುಗಲಾರಂಭಿಸಿತು. ಅವಳು ನೋಡುತ್ತಿದ್ದಂತೆ ಸೌದೆ ಕಡಿಯುತ್ತಿದ್ದರು ಸತ್ಯವಾನನು "ಸಾವಿತ್ರೀ" ಎಂದು ಚೀರುತ್ತಾ ಕೆಳಗೆ ಇಳಿದನು, ಸಾವಿತ್ರಿಯು ಭಯದಿಂದ ನಡುಗುತ್ತಾ ಸತ್ಯವಾನನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡಳು.

ಅಷ್ಟರಲ್ಲೇ ಕಪ್ಪಾದ ಆಕೃತಿಯೊಂದು ಕೈಯಲ್ಲಿ ಶೂಲವನ್ನು ಹಿಡಿದು ಸತ್ಯವಾನನ ಪಕ್ಕದಲ್ಲಿ ನಿಂತುಕೊಂಡಿತು. ಸಾವಿತ್ರಿಯು ಅಳುತ್ತಾ ತನ್ನ ಗಂಡನನ್ನು ಕೆಳಗೆ ಮಲಗಿಸಿ ಎದ್ದು ಆ ಆಕೃತಿಗೆ ನಮಸ್ಕರಿಸಿ ಭಯದಿಂದ ತಾವು ಯಾರೆಂದು ಪ್ರಶ್ನಿಸಿ, ಪುನಃ ಪತಿದೇವನನ್ನು ತೊಡೆಯಲ್ಲಿ ಮಲಗಿಸಿಕೊಂಡಳು

"ನಾನು ಯಮ, ನಿನ್ನ ಗಂಡನ ಆಯುಸ್ಸು ಇಂದಿಗೆ ಮುಗಿಯಿತು. ಈತನನ್ನು ಬಿಡು". ಎಂದಿತು ಆಕೃತಿ.

"ಸತ್ಯವಾನನಿಲ್ಲದೆ ಆರೆಕ್ಷಣವೂ ನಾನು ಬದುಕಲಾರೆ. ಅವನ ಬದಲಿಗೆ ನನ್ನ ಜೀವವನ್ನು ತೆಗೆದುಕೊ. ಅವನು ಬದುಕಲಿ" ಎಂದು ಸಾವಿತ್ರಿಯು ಗಂಡನನ್ನು ತಬ್ಬಿಕೊಂಡು ರೋದಿಸತೊಡಗಿದಳು.

"ನಿನ್ನನ್ನು ಕೊಂಡುಹೋಗಲು ಬಂದವನಲ್ಲ ನಾನು. ಸಾವಿತ್ರೀ, ಸಾಮಾನ್ಯರ ಕಣ್ಣಿಗ ನಾನು ಕಾಣಿಸುವುದಿಲ್ಲ, ನಿನ್ನ ಪತಿಭಕ್ತಿ, ಕಠಿಣ ವ್ರತಗಳ ಫಲವಾಗಿ ನಿನಗೆ ಕಾಣಿಸಿದ್ದೇನೆ. ಈತನನ್ನು ಬಿಡು. ನೀನು ಆಶ್ರಮಕ್ಕೆ ಹೋಗಿ ಈತನ ಅಂತ್ಯ ಸಂಸ್ಕಾರ ನಡೆಸು" ಎಂದ ಯಮಧರ್ಮ.

ಸಾವಿತ್ರಿಯು ಪತಿಯನ್ನು ಕೆಳಗೆ ಮಲಗಿಸಿದಳು. ಅಷ್ಟರಲ್ಲಿ ಯಮನು ಸತ್ಯವಾನನ ಪ್ರಾಣವನ್ನು ಪಾಶದಲ್ಲಿ ಸೆಳೆದುಕೊಂಡು, ದಕ್ಷಿಣ ದಿಕ್ಕಿಗೆ ಸ್ವಲ್ಪದೂರ ಹೋಗಿ ಹಿಂತಿರುಗಿ ನೋಡಲು ಸಾವಿತ್ರಿಯು ಅವನ ಹಿಂದೆಯೇ ಬರುತ್ತಾ ಇದ್ದಳು.

ತನ್ನ ಹಿಂದೆಯೇ ಬರುತ್ತಿರುವ ಹೆಣ್ಣಿನ ಧೈರ್ಯವನ್ನು ಮನದಲ್ಲೇ ಮೆಚ್ಚಿ, ಅದನ್ನು ಅವಳಿಗೆ ತೋರಿಸದೆ, "ಮಗಳೇ, ನಿನ್ನ ಅವನ ಋಣ ಇಂದಿಗೆ ತೀರಿತು. ನೀನು ಇನ್ನು ಜೊತೆಯಲ್ಲಿ ಬರುವಿಯೇಕೆ? ಹಿಂತಿರುಗಿ ಹೋಗು. ನಾನು ಹೇಳಿದಂತೆ ಮಾಡು" ಎಂದನು ಯಮ.

"ಸತಿಗೆ ಪತಿಯೇ ಪರದೈವ. ಹೀಗಿರುವಾಗ ಗಂಡನಿರುವಲ್ಲಿ ಹೆಂಡತಿಯಾದ ನಾನು ಇರಬೇಕಾದುದು ಧರ್ಮವಲ್ಲವೇ? ನಾನು ಧರ್ಮವನ್ನು ಬಿಡಲಾರೆ. ನನ್ನ ಗಂಡನನ್ನು ಬದುಕಿಸಿ ಕೊಡು".

"ಸತ್ತವರು ಮರಳಿ ಬರುವರೇ? ಹುಟ್ಟು, ಸಾವು, ವಿಧಿ ಲಿಖಿತ. ಆದ್ದರಿಂದ ಸತ್ಯವಾನನ ಚಿಂತೆಯನ್ನು ಬಿಡು. ನಿನ್ನ ಪತಿಭಕ್ತಿಗೆ ಮೆಚ್ಚಿದ್ದೇನೆ. ನಿನ್ನ ಗಂಡನ ಪ್ರಾಣವನ್ನು ಬಿಟ್ಟು ಬೇರೆ ಯಾವುದಾದರೂ ಒಂದು ವರವನ್ನು ಕೇಳು ಕೊಡುತ್ತೇನೆ"

"ಪ್ರಭೂ, ನನಗೆ ಪತಿಯ ಪ್ರಾಣದ ಹೊರತು ಇನ್ನೇನೂ ಬೇಡ. ನೀನು ವರ ಕೊಡುವುದಾದರೆ ಕುರುಡನಾದ ನನ್ನ ಮಾವನಿಗೆ ಕಣ್ಣುಗಳು ಬರಲಿ" ಎಂದಳು. ಯಮನು "ಹಾಗೇ ಆಗಲಿ" ಎಂದು ಮತ್ತೂ ಮುಂದಕ್ಕೆ ತೆರಳಿದನು.

ಬಹುದೂರ ಹೋಗಿ ತಿರುಗಿ ನೋಡಲು ಸಾವಿತ್ರಿಯು ಅವನೊಂದಿಗೇ ಬರುವುದನ್ನು ಕಂಡು ಅವಳಲ್ಲಿ "ಸಾವಿತ್ರೀ ನಿನಗೆ ಬಹಳ ಆಯಾಸವಾಗಿದೆ, ನೀನು ಹಿಂತಿರುಗು" ಎಂದನು. "ದೇವ! ಗಂಡನಿರುವಲ್ಲಿ ನನಗೇತರ ಆಯಾಸ, ಅವನ ಕಷ್ಟವೇ ನನ್ನ ಕಷ್ಟ ಅವನ ಸುಖವೇ ನನ್ನ ಸುಖ. ಉತ್ತಮ ಪುರುಷರ ಸಂಗದಿಂದ ನಾನು ಧನ್ಯನಾದೆ. ಸತ್ಸಂಗದಿಂದ ಉತ್ತಮ ಫಲ ದೊರಕುತ್ತದೆ. ಮಾತಿನಲ್ಲಿ, ಕಾರ್ಯದಲ್ಲಿ, ಮನಸ್ಸಿನಲ್ಲಿ ಯಾರಿಗೂ ದ್ರೋಹ ಮಾಡದೆ ಉಪಕಾರ ಮಾಡಬೇಕು. ಉತ್ತಮರು ಶತ್ರುಗಳಿಗೂ ಹಿತವನ್ನೇ ಬಯಸುತ್ತಾರೆ. ಇದೇ ಧರ್ಮ ಎಂದು ನಾನು ತಿಳಿದಿದ್ದೇನೆ'.

ಸಾವಿತ್ರಿಯ ಈ ಮಾತುಗಳನ್ನು ಕೇಳಿದ ಯಮನು "ಅಮ್ಮಾ, ನಾನೀತನಕ ಯಾರಿಂ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪಾ 8-30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | " | 40-00 |
| 3. | ಪುಳಿಯೋಗರೆ | " | 50-00 |
| 4. | ಪೊಂಗಲು | " | 55-00 |
| 5. | ಸಕ್ಕರಪೊಂಗಲ್ | " | 65-00 |
| 6. | ಶಾಕರ ಭಾತ್ | " | 85-00 |
| 7. | ಕೇಸರೀ ಭಾತ್ | " | 90-00 |
| 8. | ಸೀರ | " | 155-00 |

ವಿವರಗಳಿಗೆ:
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.


ದಲೂ ಇಂತಹ ಮಾತುಗಳನ್ನು ಕೇಳಿಲ್ಲ. ನಿನ್ನ ಮಾತು ಅಮೃತದಂತಿದೆ. ನನಗೆ ಇವನ್ನು ಕೇಳಿ ಮಹದಾನಂದವಾಯಿತು. ಗಂಡನ ಪ್ರಾಣದ ಹೊರತು ಇನ್ನೂ ಎರಡು ವರಗಳನ್ನು ಕೇಳು".

"ದೇವಾ, ನನ್ನ ಮೇಲೆ ಪ್ರಸನ್ನನಾಗಿದ್ದೀಯೆ. ನನ್ನ ಮಾವನಿಗೆ ಕಳೆದು ಹೋದ ರಾಜ್ಯ ಮರಳಿ ದೊರೆಯುವಂತಾಗಲಿ. ನನ್ನ ತಂದೆಗೆ ವಂಶಾಭಿವೃದ್ಧಿಗೆ ಶಕ್ತಿವಂತರಾದ ಗಂಡುಮಕ್ಕಳೂ, ನನಗೂ ಉತ್ತಮ ನಡೆ ನುಡಿಗಳುಳ್ಳ ಬಲಶಾಲಿಗಳಾದ ಪುತ್ರರೂ ದೊರೆಯುವಂತಾಗಲಿ''.

"ಹಾಗೇ ಆಗಲಿ ನೀನು ತುಂಬಾ ದಣಿದಿರುವೆ, ಇನ್ನು ಹಿಂದಕ್ಕೆ ಹೋಗು'' ಎಂದು ಯಮನು ಆಜ್ಞಾಪಿಸಿದನು.

ಆಗ ಆ ಸಾಧ್ವೀಮಣಿಯು, "ದೇವಾ, ಸತ್ಯವಾನನಿಲ್ಲದ ನನ್ನ ಬಾಳು ವ್ಯರ್ಥ. ಅವನಿಲ್ಲದ ಸ್ವರ್ಗ ಸುಖಗಳು ನನಗೇತಕ್ಕೆ? ನನ್ನ ಇನ್ನೊಂದು ಮಾತನ್ನು ಕೇಳು. ನೀನು ಪ್ರತಾಪಶಾಲಿ. ಧರ್ಮದಿಂದ ನಡೆಯುವವನು. ಎಂತಹ ಕಷ್ಟಬಂದರೂ ಸಜ್ಜನರು ಸತ್ಯವನ್ನು ಬಿಡಲಾರರು. ಸಜ್ಜನನಾದ ನೀನು ನನಗೆ ಕೇಡನ್ನು ಬಗೆಯಲಾರೆ. ನಿನ್ನಲ್ಲಿ ನನಗೆ ನಂಬುಗೆಯಿದೆ. ನೀನು ಧರ್ಮದಿಂದ ನಡೆಯುವ ಯಮಧರ್ಮನಾದರೆ ಈ ನನ್ನ ಪತಿಯನ್ನು ಬದುಕಿಸಿಕೊಡು ಇಲ್ಲದಿದ್ದರೆ ಇವನೊಂದಿಗೆ ನಾನೂ ಬರುವೆ. ಇದೇ ನನ್ನ ಕೊನೆಯ ಹರಕೆ" ಎಂದಳು.

ಯಮನು ಸಾವಿತ್ರಿಯ ಮಾತುಗಳಿಗೆ ಸೋತನು. ನಾಲ್ಕನೆಯ ವರವಾಗಿ ಸತ್ಯವಾನನ ಜೀವವನ್ನೇ ಕೊಟ್ಟನು.

"ದೇವೀ ಇಗೋ ನಿನ್ನ ಗಂಡನನ್ನು ಬಿಟ್ಟುಕೊಟ್ಟಿದ್ದೇನೆ. ಅವನು ಆರೋಗ್ಯವಂತನಾಗಿ ಧರ್ಮದಿಂದ ಬಹುಕಾಲ ಬಾಳುತ್ತಾನೆ. ನಿನ್ನ ಕಠಿಣವಾದ ವ್ರತದಿಂದ, ಧರ್ಮದಿಂದ ನಿಷ್ಠೆಯಿಂದ ಗಂಡನನ್ನು ಮರಳಿ ಪಡೆದೆ. ನೀನು ಈತನೊಂದಿಗೆ ಸುಖ ಸಂಸಾರ ನಡೆಸಿ, ಸತ್ಪುತ್ರರನ್ನು ಪಡೆದು, ಸಂತೋಷದಿಂದ ಲೋಕದಲ್ಲಿ ಪತಿವ್ರತಾ ಸ್ತ್ರೀಯೆಂದು ಹೆಸರು ಪಡೆ. ನಿನಗೆ ಸರಿಸಮಾನರಾದವರು ಯಾರೂ ಇಲ್ಲ. ಇನ್ನು ನೀನು ಹಿಂತಿರುಗು' ಎಂದು ಹೇಳಿ ಯಮನು ಮಾಯವಾದನು.

ಸಾವಿತ್ರಿಯು ಸತ್ಯವಾನ ಮಲಗಿದ್ದಲ್ಲಿಗೆ ಬಂದು ಆತನನ್ನು ಸ್ಪರ್ಶಿಸಲು ಅವನು ಜೀವಂತನಾದನು. ಸತ್ತುಹೋದ ಪತಿ ಮರಳಿ ಜೀವಂತನಾದಾಗ ಆ ಸತಿಯ ಸಂತೋಷಕ್ಕೆ ಪಾರವೇ ಇಲ್ಲದಾಯಿತು.

"ಪ್ರಿಯೆ, ನಾನು ಎಷ್ಟು ಹೊತ್ತು ನಿದ್ದೆ ಮಾಡಿದೆ? ಈಗ ರಾತ್ರಿಯಾಯಿತೆ? ಅಯ್ಯೋ! ನನಗೇಕೆ ಬಂತು ಈ ಹಾಳು ನಿದ್ರೆ. ನಾನು ಮಲಗಿದ್ದಾಗ ಬಂದು ಕಪ್ಪು ಆಕೃತಿಯನ್ನು ಕಂಡೆ. ಅದು ನನ್ನನ್ನು ಎಳೆದುಕೊಂಡು ಹೋದಂತೆ ಕಂಡೆ, ನೀನು ಅದನ್ನು ನೋಡಿದೆಯಾ ಅಥವಾ ಅದು ನನ್ನ ಕನಸೇ? ಹೇಳು ಸಾವಿತ್ರಿ''.

"ಕಣ್ಣೇ ಕಾಣಿಸದಷ್ಟು ಕತ್ತಲೆ ನಾಳೆ ಎಲ್ಲಾ ವಿಷಯವನ್ನೂ ಹೇಳುವೆ. ಕಟ್ಟಿಗೆ ತರಲೆಂದು ಕಾಡಿಗೆ ಬಂದ ನಮ್ಮನ್ನು ಹಿರಿಯರು ದಾರಿನೋಡುತ್ತಿರಬಹುದು. ಬೇಗನೆ ಆಶ್ರಮಕ್ಕೆ ಹೋಗೋಣ'' ಎನ್ನುತ್ತಾ ಸಾವಿತ್ರಿಯು ಗಂಡನ ಕೈಹಿಡಿದುಕೊಂಡು ಆಶ್ರಮದ ಕಡೆ ನಡೆದಳು.

ಕಳೆದುಹೋದ ರಾಜ್ಯವನ್ನು ಮರಳಿ ಪಡೆದು, ಹೊಳಪಿನ ಕಣ್ಣುಗಳಿಂದ ಕೂಡಿ ಮಗ ಸೊಸೆಯರ ದಾರಿ ನೋಡುತ್ತಾ ಕುಳಿತ ಮಾವನಿಗೆ ಸಾವಿತ್ರಿಯು ಮೊದಲಾಗಿ ವಂದಿಸಿದಳು. ಅತ್ತೆ ಮಾವಂದಿರು ಇಬ್ಬರನ್ನೂ ಪ್ರೀತಿಯಿಂದ ತಬ್ಬಿಕೊಂಡರು. ಸಾವಿತ್ರಿಯು ಕಾಡಿನಲ್ಲಿ ನಡೆದ ಎಲ್ಲಾ ವೃತ್ತಾಂತವನ್ನೂ ಅವರಿಗೆ ತಿಳಿಸಿದಳು. ಅವರು ಸೊಸೆಯನ್ನು ತುಂಬು ಹೃದಯದಿಂದ ಹರಸಿದರು.

ನಿರ್ಮಲವಾದ ಭಕ್ತಿಯಿಂದ, ಗಂಡನಲ್ಲಿದ್ದ ಅಚಲವಾದ ಪ್ರೇಮದಿಂದ, ಸಾವಿನೊಡನೆ ಹೋರಾಡಿ ಪ್ರಿಯತಮನನ್ನು ಮರಳಿಪಡೆದ ಸ್ತ್ರೀರತ್ನ "ಸತೀ ಸಾವಿತ್ರಿ"ಯ ಹೆಸರು ಇಂದಿಗೂ ಪ್ರಭಾವಶಾಲಿಯಾಗಿದೆ.

★

# ಕೈವಾರ - ಯೋಗಿನಾರಾಯಣ

ಭರತಚಕ್ರವರ್ತಿ ಆಳಿದ ಈ ಭರತಖಂಡ ಅನೇಕ ಪುಣ್ಯಕ್ಷೇತ್ರಗಳ, ಯೋಗಿಗಳ, ಸಾಧು ಸಂತರ, ತಪೋಭೂಮಿಯಾಗಿದೆ ತಪಸ್ವಿಗಳ ಯೋಗಸಾಧನೆಯಿಂದ ಈ ಭರತಭೂಮಿ, ಅದರಲ್ಲೂ ಕನ್ನಡನಾಡು ಪುಣ್ಯಪಾವನತೆಯ ಬೀಡಾಗಿದೆ. ಈ ನಾಡು ತಪಸ್ವಿಗಳ ನೆಲೆವೀಡಾದಂತೆ ಪ್ರಕೃತಿಯ ಸೊಬಗಿಗೂ ಹಸರಾಗಿದೆ ಕನ್ನಡ ನಾಡಿನ ಗದಗು, ದೇವಪುರ, ಕೈವಾರ – ಈ ಮೂರೂ ಸುಪ್ರಸಿದ್ಧ ಮಹಾಕ್ಷೇತ್ರಗಳಾಗಿವೆ ಈ ಮೂರು ಕ್ಷೇತ್ರಗಳಲ್ಲೂ ನಾರಾಯಣ ಮೂರ್ತಿಯು ನೆಲೆಸಿ ಕನ್ನಡಿಗರನ್ನು ಕೈದೋರಿ ಬಳಿ ಕರೆದು ಅವರವರ ಇಷ್ಟಾರ್ಥಗಳನ್ನು ನೆರವೇರಿಸುತ್ತಿರುವನು

ಕೋಲಾರ ಜಿಲ್ಲೆಯ ಕೈವಾರದ ಅಮರ ನಾರಾಯಣ ಎಂದ ಕೂಡಲೇ ಸಾಕ್ಷಾತ್ ನಾರಾಯಣ ಮೂರ್ತಿಯೇ ನಮ್ಮ ಕಣ್ಣು ಮುಂದೆ ನಿಂತಂತಾಗಿ ಮೈಯಲ್ಲಿ ಮಿಂಚಿನ ಹೊಳೆ ಹರಿದಾಡುವುದು ಈ ಭವ್ಯ ಅಮರ ನಾರಾಯಣಮೂರ್ತಿಯನ್ನು ದರ್ಶಿಸಿದಾಕ್ಷಣದಲ್ಲಿಯೇ ಮನದಲ್ಲಿ ಶಾಂತಿ ನೆಲೆಸುವುದು, ಆತ್ಮ ವಿಕಾಸ ಗೊಳ್ಳುವುದು ಇದು ಆ ಕ್ಷೇತ್ರವನ್ನು ದರ್ಶಿಸಿದ ಪ್ರತಿಯೊಬ್ಬ ಕನ್ನಡ ಹಾಗೂ ಇತರ ಭಕ್ತರ ಏಕರೂಪವಾದ ಅನುಭವ

ಕೃತಯುಗದಲ್ಲಿ ದೇವತೆಗಳಿಗೆ ಕಂಟಕಪ್ರಾಯನಾಗಿದ್ದ ವೃತ್ರಾಸುರನನ್ನು ಸಂಹರಿಸಲು ದೇವತೆಗಳು ದೇವೇಂದ್ರನಲ್ಲಿ ಮೊರೆಯಿಡಲು ದೇವೇಂದ್ರನು ತನ್ನ ವಜ್ರಾಯುಧದಿಂದ ಅಸುರನನ್ನು ಸಂಹರಿಸಿದನೆಂದೂ ಇವನ ಸಂಹಾರದಿಂದ ದೇವೇಂದ್ರನಿಗೆ ಬ್ರಹ್ಮಹತ್ಯಾದೋಷವುಂಟಾಗಲು ಆಗ ದೈವ ಪ್ರೇರಣೆಯಂತೆ ದೇವೇಂದ್ರನು ಭೂಲೋಕದಲ್ಲಿ ಪಂಚನಾರಾಯಣ ಮೂರ್ತಿಗಳನ್ನು ಪ್ರತಿಷ್ಠಾಪಿಸಿದನೆಂದೂ, ಅವುಗಳಲ್ಲಿ ಒಂದಾದ ಅಮರ ನಾರಾಯಣಸ್ವಾಮಿಯನ್ನು ಕೈವಲ್ಯಪುರದಲ್ಲಿ ಪ್ರತಿಷ್ಠಾಪಿಸಿ ಕೃತಾರ್ಥನಾದನು ಎಂಬುದೂ ಪುರಾಣೋಕ್ತಿಯಾಗಿದೆ

ತ್ರೇತಾಯುಗದಲ್ಲಿ ಅಯೋಧ್ಯೆಯ ಅಜೇಯ ಚಕ್ರವರ್ತಿ ದಶರಥ ಮಹಾರಾಜನ ಪುತ್ರನಾಗಿ ಅವತರಿಸಿದ ಶ್ರೀ ರಾಮಚಂದ್ರನು ಪಿತೃವಾಕ್ಯ ಪರಿಪಾಲನಾರ್ಥವಾಗಿ ವನವಾಸ ಮಾಡುವಂತಹ ಸಂದರ್ಭದಲ್ಲಿ ಘೋರಾರಣ್ಯಗಳಲ್ಲಿ ಸಂಚರಿಸುತ್ತಾ ಪುಣ್ಯಕ್ಷೇತ್ರಗಳನ್ನು ದರ್ಶಿಸುತ್ತಾ ಕೈವಲ್ಯಪುರದ ಅಮರ ನಾರಾಯಣಸ್ವಾಮಿಯನ್ನು ದರ್ಶಿಸಿ ನಂತರ ಬೆಟ್ಟಗಳಲ್ಲಿ ಸಂಚರಿಸುತ್ತಾ ಇದ್ದಂತಹ ಸಮಯದಲ್ಲಿ ಲಕ್ಷ್ಮಣನು ಅಣ್ಣನ ಬಾಯಾರಿಕೆಯನ್ನು ನೀಗಿಸಲು ಬಾಣವನ್ನು ಹೂಡಿ ಗಂಗೆಯನ್ನು ಕರೆಸಿದನಂತೆ ರಾಮಚಂದ್ರನ ದಾಹ ಹಿಂಗಿದ ಬಳಿಕ ಗಂಗೆಯು ಸ್ವಲ್ಪದೂರ ಹರಿದು ಗುಪ್ತಗಾಮಿನಿಯಾದಳು ಈ ಪವಿತ್ರ ಸ್ಥಳವು ಲಕ್ಷ್ಮಣ ತೀರ್ಥವೆಂದು ಪ್ರಸಿದ್ಧವಾಗಿ ಇಂದಿಗೂ ಪವಿತ್ರ ಜಲಸನ್ನಿಧಿಯಾಗಿದೆ ಹಾಗೂ ಯಾತ್ರಾರ್ಥಿಗಳ ತೀರ್ಥ ಸ್ನಾನದ ತಾಣವಾಗಿದೆ ಈ ವಿಚಾರವು ರಾಮಾಯಣದ ಅರಣ್ಯಕಾಂಡದಲ್ಲಿ ಗೋಚರವಾಗಿರುತ್ತೆ. ಈ ಪವಿತ್ರ ಲಕ್ಷ್ಮಣ ತೀರ್ಥದ ಮುಂಭಾಗದಲ್ಲಿ ಶ್ರೀ ಚಾಮುಂಡಾಂಬಿಕೆಯ ದೇವಾಲಯವಿದ್ದು ಶಾಕ್ತೋಪಾಸಕರಿಗೆ ಪರಮ ಪವಿತ್ರಕ್ಷೇತ್ರವಾಗಿದೆ


ಭೀಮಲಿಂಗೇಶ್ವರಸ್ವಾಮಿ

ದ್ವಾಪರ ಯುಗದಲ್ಲಿ ಶ್ರೀಕೃಷ್ಣನ ಅವಿಚ್ಛಿನ್ನ ಭಕ್ತರಾದ ಪಾಂಡವರು ತಮ್ಮ ದಾಯಾದಿಗಳಾದ ಕೌರವರಿಂದ ಒದಗಿದ ಕಷ್ಟಕಾರ್ಪಣ್ಯಗಳನ್ನು ಸಹಿಸುತ್ತಾ ಅರಗಿನ ಮನೆಯಿಂದ ಪಾರಾದ ಬಳಿಕ, ವನವಾಸಕಾಲದಲ್ಲಿ ಅರಣ್ಯಗಳಲ್ಲಿ ಸಂಚರಿಸುತ್ತಾ ವಿವಿಧ ವೇಷಧಾರಿಗಳಾಗಿ ಏಕಚಕ್ರಪುರಕ್ಕೆ ಬಂದು ನೆಲೆಸಿ ಅಮರ ನಾರಾಯಣಸ್ವಾಮಿಯ ಸೇವೆಗೈಯುತ್ತಿರಲು ಆ ಕ್ಷೇತ್ರದಲ್ಲಿ ಕಂಟಕಪ್ರಾಯನಾಗಿದ್ದ ಬಕಾಸುರನೆಂಬ ರಾಕ್ಷಸನನ್ನು ಭೀಮನು ಸಂಹರಿಸಿ ಜನಕಲ್ಯಾಣವನ್ನುಂಟುಮಾಡಿದನು ರಾಕ್ಷಸನ ಹತ್ಯಾದೋಷನಿವಾರಣೆಗಾಗಿ ಭೀಮನು 'ಭೀಮಲಿಂಗೇಶ್ವರ'ಸ್ವಾಮಿಯನ್ನು ಪ್ರತಿಷ್ಠಾಪಿಸಿದನು ಎಂಬುದು ಪುರಾಣೋಕ್ತಿಯಾಗಿದೆ ಅಂದಿನಿಂದ ಹರಿ–ಹರ ಕ್ಷೇತ್ರವಾಗಿ ಪ್ರಸಿದ್ಧವಾಗಿ ಶಿವಭಕ್ತರಿಗೆ ಅಭಯಪ್ರದಾಯಕವಾಗಿದೆ ಭೀಮಲಿಂಗೇಶ್ವರ ದೇವಾಲಯವು ತುಂಬಾ ಪುರಾತನವಾಗಿದ್ದು, ಈ ದೇವಾಲಯದಲ್ಲಿ ಪಂಚ ಪಾಂಡವರು ಪ್ರತಿಷ್ಠಾಪಿಸಿದ ಪಂಚ ಶಿವಲಿಂಗಗಳನ್ನು ಸಹ ಕಾಣಬಹುದು ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಅವತಾರಪುರುಷ ಶ್ರೀ ಮಹಾವಿಷ್ಣು ನಿಮಿತ್ತಮಾತ್ರದಿಂದ ಕೈವಾರ ಕ್ಷೇತ್ರದಲ್ಲಿ ಗೋಚರನಾಗಿ ಅದನ್ನು ಪುಣ್ಯಕ್ಷೇತ್ರವನ್ನಾಗಿಸಿ ಕಂಗೊಳಿಸಿದನು

ಅದರಂತೆಯೇ ಕಲಿಯುಗದಲ್ಲಿಯೂ ಸಹಾ ಆಯಾ ಕ್ಷೇತ್ರಗಳು ವೈಶಿಷ್ಟ್ಯಪೂರ್ಣವಾದ ಪವಿತ್ರ ಯಾತ್ರಾಸ್ಥಳಗಳಾಗಲು ದೈವೀ ನಿಯಾಮಕದಂತೆ ಓರ್ವ ವಿಭೂತಿ ಪುರುಷನೋ, ಓರ್ವಕವಿಯೋ, ಓರ್ವ ಸಿದ್ಧ ಪುರುಷನೋ ಜನಿಸಿ ಆಯಾ ಕ್ಷೇತ್ರಗಳ ಜನಕಲ್ಯಾಣಕ್ಕಾಗಿ ದುಡಿಯಲು ಪ್ರೇರಕವಾದಂತೆ ಗದುಗಿನಲ್ಲಿ ನಾರಾಯಣಪ್ಪ, ದೇವಪುರದ ಲಕ್ಷ್ಮೀಶಕವಿ, ಕೈವಾರ ಕ್ಷೇತ್ರದಲ್ಲಿ ಯೋಗಿನಾರಾಯಣ ಯತೀಂದ್ರರು ಜನಿಸಿದರೆಂದರೆ ಅತಿಶಯೋಕ್ತಿಯಾಗಲಾರದು.

ಕೈವಾರವನ್ನು ಪಾವನಗೊಳಿಸಿದ ಕೈವಾರದ ಗುರು ಯೋಗಿ ನಾರಾಯಣ ಯತೀಂದ್ರರ ಜೀವನ ಚರಿತ್ರೆ ಆಸಕ್ತಿದಾಯಕವಾಗಿದೆ

ಕಲಿಯುಗದ ಆದಿಯಿಂದಲೂ ಪ್ರಮುಖವಾಗಿ ಬಂದ ಕೈವಾರ ಕ್ಷೇತ್ರದಲ್ಲಿ ಈಗ ಸುಮಾರು 257 ವರ್ಷಗಳ ಹಿಂದೆ ಎಂದರೆ ಕ್ರಿ. ಶ. 1726ರಲ್ಲಿ ಓರ್ವ ಸಾಮಾನ್ಯ ಬಲಿಜ ಜನಾಂಗದ ಬಡ ಕುಟುಂಬದಲ್ಲಿ ಶ್ರೀ ಅಮರ ನಾರಾಯಣಸ್ವಾಮಿಯ ಭಕ್ತರಾದ, ಆದರ್ಶ ದಂಪತಿಗಳಾದ ಕೊಂಡಪ್ಪ – ಮುದ್ದಮ್ಮ ಎಂಬ ಸತಿಪತಿಗಳಲ್ಲಿ ಜನಿಸಿದ ಮಗುವೇ ಕೈವಾರ ನಾರಾಯಣಪ್ಪ

ಶ್ರೀ ಸು. ರ. ರಾಮಚಂದ್ರ

ನವರು. ಮಗು ಜನನವಾದ ಕೂಡಲೇ ತಾಯಿಯು ಕೈವಲ್ಯಪದವಿಯನ್ನು ಹೊಂದಿದಳು ನಂತರ ಕೆಲವೇ ಮಾಸಗಳು ಉರುಳುವುದರಲ್ಲಿಯೇ ತಂದೆಯವರೂ ಸಹಾ ಪರಂಧಾಮವನ್ನೈದಿದರು ಶಿಶುವನ್ನು ಹತ್ತಿರದ ಸಂಬಂಧಿಕರು ಬೆಳೆಸಿದರು

ತಂದೆ-ತಾಯಿಗಳ ಪೂರ್ವಾರ್ಜಿತ ಪುಣ್ಯ ವಿಶೇಷ ಸಂಸ್ಕಾರ ಫಲವೋ ಎಂಬಂತೆ ಮಗುವಿನಲ್ಲಿ ದೈವ ಭಕ್ತಿ ಅಂಕುರವಾಗಿ ದೈವತ್ತ್ವದ ಕಡೆಗೆ ತಿರುಗಲು ಅನುವಾಯಿತು

ಬಾಲಕರಾದ ನಾರಾಯಣಪ್ಪನವರಿಗೆ ಅಂದಿನ ವಿದ್ಯಾಸಂಸ್ಥೆಗಳಾದ ಕೂಲಿ ಮಠಗಳಲ್ಲಿ ತಮ್ಮ ವ್ಯಾಸಂಗವನ್ನು ನಡೆಸುವುದಕ್ಕೆ ಕೂಡ ಯತ್ನವಿಲ್ಲದೆ ಅವರಿವರ ಸಹಾಯದಿಂದ ಅಕ್ಷರಾಭ್ಯಾಸವನ್ನು ಮಾಡಿದರು ಅಂದಿನ ಕಾಲದ ಮೊದಲನೆ ಪಠ್ಯಪುಸ್ತಕಗಳೆಂದರೆ ಸುಮತೀ ಶತಕ, ನರಸಿಂಹ ಶತಕ ಇಂತಹವುಗಳು ಇವುಗಳಲ್ಲಿರುವ ನೀತಿ ಮನುಷ್ಯನು ಆಜನ್ಮಪರ್ಯಂತ ತಿಳಿದುಕೊಳ್ಳಬೇಕಾದದ್ದು ಹೀಗಾಗಿ ನಾರಾಯಣಪ್ಪನವರು ತಮ್ಮ ಪಠ್ಯಾನುಕ್ರಮಗಳನ್ನು ಕಂಠಪಾಠ ಮಾತ್ರ ಮಾಡದೆ ಅವುಗಳ ಅರ್ಥಗ್ರಹಣ ಮಾಡುತ್ತಾ ತಾವು ಓದಿದ ಭಾಗಗಳ ತತ್ತ್ವವನ್ನು ತರ್ಕಮಾಡಿ ತಿಳಿದುಕೊಳ್ಳುತ್ತಿದ್ದರು

ವಯಸ್ಕರಾದ ನಾರಾಯಣಪ್ಪನವರು ಜೀವನ ನಿಮಿತ್ತಕ್ಕೆ ತಮ್ಮ ಕುಲಕಸುಬಾದ ಬಳೆ ವ್ಯಾಪಾರ ಗೈಯ್ಯುತ್ತಿದ್ದರು ಬಳೆ ವ್ಯಾಪಾರದಲ್ಲಿ ಹೆಚ್ಚು ಲಾಭ ಗಳಿಸಲು ಅಪೇಕ್ಷೆಯುಂಟಾಗದೆಯೇ ಬಡತನದ ಬೇಗೆಯಿಂದ ನೊಂದು ಹಿಂದುಮುಂದರಿಯದೆ ಆಹಾರಕ್ಕಾಗಿ ಅಲೆದಾಡುತ್ತಾ ಬಾಳುತ್ತಿದ್ದ ಇವರಿಗೆ ಸಂಸಾರ ಸಂಬಂಧ ಕಾರ್ಯಗಳಲ್ಲಿ ಜಿಗುಪ್ಸೆ ಹುಟ್ಟಿತು.

ಆದರೂ ಸಹ ಯವ್ವನದ ಅಂಕುರವೋ, ಬಂಧುಗಳ ಅನುನಯದಿಂದಲೋ ಅಥವಾ ಧರ್ಮ ಕರ್ಮ ಸಂಯೋಗದಿಂದಲೋ ಮುನಿಯಮ್ಮ ಎಂಬ ಕನ್ಯೆಯನ್ನು ವಿವಾಹವಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದರು, ಇವರಿಗೆ ಇಬ್ಬರು ಗಂಡು ಮಕ್ಕಳು, ಒಂದು ಹೆಣ್ಣು ಮಗು ಜನಿಸಿದ್ದು, ಇವರಿಗೆ ಸಂಸಾರದ ಹೊಣೆ ದುರ್ಭರವಾಯಿತು

ದೈವಿಕ ಭಾವನೆಯುಳ್ಳ ಇವರಿಗೆ ಬಳೆ ವ್ಯಾಪಾರವು ಲಾಭದಾಯಕವಾಗಿರಲಿಲ್ಲ ಸಂಸಾರ ತೂಗಿಸುವುದೇ ಕಷ್ಟವಾಗಿತ್ತು ಅಲ್ಲದೆ ಸಂಸಾರದಲ್ಲಿ ಪತ್ನಿಯೊಡನೆ ಕಲಹಗಳುಂಟಾಗಿ ಗೃಹ ಜೀವನ ಕಷ್ಟತರವಾಗಿ ಮನಃಶಾಂತಿಯಿಲ್ಲವಾಯಿತು

ದೈವ ಭಕ್ತರಾದ ನಾರಾಯಣಪ್ಪನವರು ಮನಃಶಾಂತಿಗಾಗಿ ಊರಿನ ಮಧ್ಯ ಭಾಗದಲ್ಲಿದ್ದ ನರಸಿಂಹ ದೇವಾಲಯದಲ್ಲಿ ತಂಬೂರಿ ಮೀಟುತ್ತಾ ಹಲವಾರು ಕೀರ್ತನೆಗಳನ್ನು ಹಾಡುತ್ತಾ ಕಾಲ ಕಳೆಯುತ್ತಿದ್ದರು ಹೀಗಿದ್ದಂತಹ ಸಂದರ್ಭದಲ್ಲಿ ಒಂದು ದಿನ ಸಂಜೆಯಾದೊಡನೆಯೇ ನಾರಾಯಣಪ್ಪನವರು ತಂಬೂರಿ ಹಿಡಿದು ನರಸಿಂಹ ದೇವಾಲಯಕ್ಕೆ ಹೊರಟರು ಹೆಂಡತಿ ತಡೆದರೂ ನಿಲ್ಲಲಿಲ್ಲ ದೇವಾಲಯಕ್ಕೆ ಹೋಗಿ ಕಣ್ಣು ಮುಚ್ಚಿ ತುಂಬೂರಿ ಹಿಡಿದು ಕವಿತಾಸಾರಮಾಧುರ್ಯದಿಂದ ತುಂಬಿದ ನುಡಿಗಳುಳ್ಳ ಅಮೃತವಾಣಿಯ ಕೀರ್ತನೆಗಳನ್ನು ಹಾಡುತ್ತಿದ್ದರು ಪಕ್ಕದ ಮನೆಯಲ್ಲಿದ್ದ ಶಾನುಭೋಗ ಮಲ್ಲಯ್ಯ ಎಂಬುವರಿಗೆ ಕೀರ್ತನೆ ಹಾಡುವುದು ಕೇಳಿಸತೊಡಗಿತು ಆ ಕೀರ್ತನೆಗಳು ಅರ್ಥವಾಗದೆ ತನ್ನನ್ನೇ ಹೀಯಾಳಿಸುತ್ತಿರುವನೆಂಬುದಾಗಿ ತಿಳಿದುಕೊಂಡು ನಾರಾಯಣಪ್ಪನವರಿಗೆ ತೊಂದರೆಕೊಡಲು ಪ್ರಯತ್ನಿಸಿದನು

---


ಸಂದರ್ಶಿಸಿ ಆನಂದಿಸಿ

ಉಲ್ಲಾಸದಾಯಕ ಹಾಗೂ ಉದ್ಬೋಧಕ

# ಶ್ರೀ ವೆಂಕಟೇಶ್ವರ ದೇವಾಲಯಕಲಾವಸ್ತುಸಂಗ್ರಹಾಲಯ

## ನಮ್ಮಾಳ್ವಾರ್ ದೇವಾಲಯ

**(ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಲಬದಿ)**

ವೈಷ್ಣವ ದೇವಾಲಯಗಳ ಬಗ್ಗೆ ವಿವರಗಳನ್ನು ನೀಡುವ ಮೊದಲ ವಸ್ತು ಸಂಗ್ರಹಾಲಯ, ದೇವಾಲಯಗಳ ನಿರ್ಮಾಣ, ವಿಗ್ರಹಕಲೆ, ವಿಮಾನದ ವಿವಿಧ ಬಗೆಗಳು – ಎಲ್ಲವನ್ನೂ ಚಿತ್ತಾಕರ್ಷಕವಾಗಿ ನಿರೂಪಿಸಲಾಗಿದೆ

**ಪ್ರವೇಶದರ ಪ್ರತಿ ವ್ಯಕ್ತಿಗೆ ರೂ 1-00 ಮಾತ್ರ**

ಅಂದಿನ ಕಾಲದಲ್ಲಿ ಶಾನುಭೋಗರಿಗೆ ಇದಿರೇ ಇರಲಿಲ್ಲ ಅವರು ಬರೆದ ಲೆಕ್ಕವೇ ಲೆಕ್ಕ ಶಾನುಭೋಗ ಮಲ್ಲಯ್ಯ ಸುಳ್ಳು ಲೆಕ್ಕಗಳನ್ನು ಬರೆದು ನಾರಾಯಣಪ್ಪನವರಿಗೆ ತೊಂದರೆ ಕೊಟ್ಟರು ಈ ಅನುಭವವನ್ನು ನಾರಾಯಣಪ್ಪನವರು ಒಂದು ಕೀರ್ತನೆಯಲ್ಲಿ,

"ಬ್ರಹ್ಮ ಲೆಕ್ಕಕು ಪ್ರತಿಲೆಕ್ಕ ಬ್ರಾಹ್ಮಣುಡು
ವಾಣಿ ಲೆಕ್ಕಕು ಪ್ರತಿಲೇದು ವಸುಧಲೋನ"

ಎಂದು ಹೇಳಿದ್ದಾರೆ

ಇದನ್ನು ಅರಿತ ಶ್ಯಾನುಭೋಗ ಮಲ್ಲಯ್ಯನವರ ಕಾಟ ಅತಿಯಾಯಿತು

ಇಂತಹ ಅನೇಕ ತೊಂದರೆಗಳನ್ನು ಅನುಭವಿಸಿದ ನಾರಾಯಣಪ್ಪನವರಿಗೆ ಗೃಹಸ್ಥ ಜೀವನ ಕಹಿ ಪ್ರಸಂಗವಾದರೂ ನೀರ ಮೇಲಣ ತಾವರೆಯಂತೆ ಇವರ ಬಾಳುವೆ ಸಾಗಿತ್ತು ಕೆಲವು ದಿನಗಳ ನಂತರ ನಾರಾಯಣಪ್ಪನವರ ಹೆಂಡತಿ ಮಕ್ಕಳು ಅಕಾಲ ಮರಣಕ್ಕೆ ತುತ್ತಾದರು ಇಂತಹುದೇ ಕಾರಣವೆಂದು ಹೇಳಲಾಗುವುದಿಲ್ಲ ಅಂತೂ ಮೃತ್ಯು ದೇವತೆಗೆ ಬಲಿಯಾದರು ಆಗ ನಾರಾಯಣಪ್ಪನವರು ತುಂಬಾ ನೊಂದವರಾಗಿ,

"ವಿಡವಲೇನು ಪೆಂಡ್ಲಾಮು, ಹೀನ ತೊತ್ತೈತೆ"

ಎಂದು ಹೇಳಿದ್ದಾರೆ ಅಂತೂ ಸಂಸಾರಭಾರವು ತಪ್ಪಿದ ಮೇಲೆ ನಾರಾಯಣಪ್ಪನವರು ನಿರಂತರವಾಗಿ ತಮ್ಮ ದೇಹದ, ಆತ್ಮ–ದೇವಾತ್ಮನ ಶೋಧನೆ ಗೈಯುಲು ಪ್ರಾರಂಭಿಸಿದರು

ಬಾಲ್ಯದಿಂದ ದೈವಭಕ್ತರಾದ ಇವರಿಗೆ ದೇವರನ್ನು ಕಾಣುವ ಹಂಬಲ ಹೆಮ್ಮರವಾಗಿ ಬೆಳೆದು ಗುರುದರ್ಶನಕ್ಕಾಗಿ ಗೃಹವನ್ನು ತ್ಯಜಿಸಿ ಹೊರಟರು ಆಂಧ್ರ ಪ್ರದೇಶದ ಚಿತ್ತೂರು ಬಳಿ ಇರುವ ಮೊಗಿಲಿ ವೆಂಕಟಗಿರಿ ಕಣಿವೆಯಲ್ಲಿ ಪ್ರಯಾಣ ಮಾಡುತ್ತಿದ್ದಾಗ ಅಲ್ಲಿ ಒಂದು ಗುಹೆಯಲ್ಲಿ ಧ್ಯಾನ ಮಗ್ನರಾಗಿದ್ದ ತಪಸ್ವಿಯೊಬ್ಬರು (ಪರದೇಶಿ ಸ್ವಾಮಿಗಳು) ಇವರಿಗೆ ದರ್ಶನ ವಿತ್ತು "ಓಂ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರೀ ಮಂತ್ರವನ್ನು ಉಪದೇಶ ಮಾಡುತ್ತಾ ಒಂದು ಬಿಣಚು ಕಲ್ಲನ್ನು ಅವರ ಬಾಯಲ್ಲಿಟ್ಟು "ಈ ಕಲ್ಲು ನಿನ್ನ ಬಾಯಲ್ಲಿ ಕಲ್ಲುಸಕ್ಕರೆಯಾಗಿ ಕರಗಿದಾಗ ನಿನಗೆ ಸಿದ್ಧಿಯುಂಟಾಗುವುದು" ಎಂದು ಹೇಳಿ ಅದೃಶ್ಯರಾದರು

ನಾರಾಯಣಪ್ಪ ಆಶ್ಚರ್ಯಭರಿತರಾಗಿ ದೇವಾಧಿದೇವನೇ ಈ ವೇಷದಲ್ಲಿ ಅನುಗ್ರಹಿಸಿದನೆಂದು ಅರಿತು ಆನಂದಭರಿತರಾಗಿ ಗುರುಸ್ತೋತ್ರಗೈಯ್ಯುತ್ತಾ ಆಂಧ್ರ ದೇಶದ ಎಲ್ಲಾ ತೀರ್ಥ ಕ್ಷೇತ್ರಗಳನ್ನು ದರ್ಶಿಸಿ ಮರಳಿ ಕೈವಾರಕ್ಕೆ ಬಂದು ನರಸಿಂಹಸ್ವಾಮಿಯ ಗುಹೆಯಲ್ಲಿ ತಪೋನಿರತರಾದರು ಕಾಲಾಂತರದಲ್ಲಿ ಬಾಯೊಳಗಿನ ಕಲ್ಲು ಕಲ್ಲುಸಕ್ಕರೆಯಾಗಿ ಪರಿಣಮಿಸಿ ಕರಗಲು ಸಿದ್ಧಿಯನ್ನು ಪಡೆದು ಯೋಗೀಶ್ವರರಾದರು

ಯೋಗಸಿದ್ಧಿಯನ್ನು ಪಡೆದ ನಾರಾಯಣಪ್ಪನವರು ಅಧ್ಯಾತ್ಮಿಕ ಸಿದ್ಧಿಯನ್ನು ಪಡೆದು ಶ್ರೀ ಯೋಗಿನಾರಾಯಣಯತೀಂದ್ರರಾದರು ಯತೀಂದ್ರರು ಜನಕಲ್ಯಾಣ ಕಾರ್ಯದಲ್ಲಿ ನಿರತರಾಗಿ ಆರ್ತರ ದುಃಖ ನಿವಾರಣೆ ಮಾಡಲು ದೈವ ಪ್ರೇರಣೆಯಂತೆ ಅನೇಕ ಪವಾಡಗಳನ್ನು ಸಹ ತೋರಿಸಿದ್ದಾರೆ

ಶ್ರೀ ಯತೀಂದ್ರರು ಆಧ್ಯಾತ್ಮಿಕ ಸತ್ಯವನ್ನು ಕಂಡುಕೊಂಡರು 'ಅದ್ವೈತವು ರಾಜ ಮಾರ್ಗ ಗುರೂಪದೇಶವಿಲ್ಲದೆ ಜನ್ಮ ರಾಹಿತ್ಯವಿಲ್ಲ ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ, ಅಯಮಾತ್ಮಾ ಬ್ರಹ್ಮ' ಎಂಬ ವಾಕ್ಯಗಳ ಅರ್ಥಗಳನ್ನು ಗುರುವಿನಿಂದಲೇ ತಿಳಿಯಬೇಕೆಂದಿದ್ದಾರೆ



ಕೈವಾರ ಯೋಗಿನಾರಾಯಣಸ್ವಾಮಿ

ಯಜ್ಞಯಾಗಾದಿಗಳು ಸ್ವರ್ಗಕ್ಕೆ ದಾರಿ ಮಾತ್ರ, ಜನ್ಮರಾಹಿತ್ಯವಲ್ಲ. ರೂಪ – ನಾಮ ರಹಿತನಾದ ಪರಮಾತ್ಮನನ್ನು ಅನೇಕ ರೂಪಗಳಿಂದ ಆರಾಧಿಸುತ್ತಾರೆ ಇವುಗಳೆಲ್ಲಾ ಇಷ್ಟಾರ್ಥಸಿದ್ಧಿಗೆ ವಿನಹ ಮೋಕ್ಷಕ್ಕಲ್ಲ ಎಂಬುದು ಇವರ ಅಭಿಪ್ರಾಯ ಆದರೂ ಅವರವರ ಭಾವ ಯಾವ ದಾರಿಯಲ್ಲಿ ಹೋದರೂ ಸೇರುವುದು ಒಂದೆಡೆಗೇ ತರ್ಕಮಾಡುತ್ತಾ ಕುಳಿತರೆ ಕೊನೆಯೆಲ್ಲಿ? ವಾದ–ಭೇದಗಳು ಜೀವನಿಗೆ ಇದ್ದೇ ಇರುವುವು. ಮಾನವ ಜನ್ಮದಲ್ಲಿಯೇ ಮೋಕ್ಷ ಪಡೆಯಬೇಕೆಂದು ಹೇಳಿ ಮಾನವ ಜನ್ಮಕ್ಕೆ ಬಹಳ ಪ್ರಾಶಸ್ತ್ಯ ನೀಡಿ ಆಧ್ಯಾತ್ಮಿಕ ಜೀವನದ ಶ್ರೇಷ್ಠ ಸಂತರೆನಿಸಿದ್ದಾರೆ

ಯೋಗಿ ನಾರಾಯಣಯತೀಂದ್ರರು ತಮ್ಮ ಜೀವಿತಕಾಲದಲ್ಲೇ ದೈವ ಪ್ರೇರಣೆಯಿಂದ ತಮ್ಮ ಅಂತರ್ವಾಣಿಯಂತೆ ವೇದಾಂತ ಸಾರಾವಳಿ, ಕಾಲಜ್ಞಾನ, ಭೀಮಲಿಂಗೇಶ್ವರರ ಶತಕ, ನಾದಬ್ರಹ್ಮಾನಂದ ನಾರೇಯಣ ಶತಕ, ಅಮರ ನಾರಾಯಣ ಶತಕ ಮುಂತಾದ ಕೃತಿಗಳನ್ನು ಅಮರ ನಾರಾಯಣನ ಅಂಕಿತದಲ್ಲಿ ರಚಿಸಿರುವರು. ಇವುಗಳಲ್ಲಿ ಸಾಮಾನ್ಯ ಜನರ ಹೃದಯ ವಿಕಾಸವನ್ನುಂಟು ಮಾಡುವ ಶೈಲಿಯನ್ನೇ ಬಳಸಿದ್ದಾರೆ ಇವರು ರಚಿಸಿರುವ ಗ್ರಂಥಗಳು ತೆಲುಗು ಕನ್ನಡ ಭಾಷೆಗಳಲ್ಲಿರುತ್ತವೆ ತೆಲುಗು ಭಾಷೆಯ ವೇದಾಂತ ಸಾರಾವಳಿ, ತತ್ತ್ವಗಳು ಆಂಧ್ರ ದೇಶದ ಜನಪ್ರಿಯ ತತ್ತ್ವಗಳಾಗಿ ಅಚ್ಚಳಿಯದೆ ಉಳಿದಿವೆ ಹಾಗೂ ಕೈವಾರ ತಾತಯ್ಯ ಎಂಬ ಲೋಕರೂಢಿಯ ಮಾತು ಪ್ರತಿಯೊಬ್ಬರ ಬಾಯಲ್ಲೂ ಕೇಳಬಹುದು ಅದರಂತೆಯೇ ಕನ್ನಡ ನಾಡಿನ ಬಗ್ಗೆ ಹಲವಾರು ವಿಷಯಗಳನ್ನು ಕಾಲಜ್ಞಾನದಲ್ಲಿ ಬಿತ್ತರಿಸುತ್ತಾ ಹಲವಾರು ಕೀರ್ತನೆಗಳನ್ನು ರಚಿಸಿರುವರು

ಕನಕದಾಸರ ಮನೆಯ ಕಸಗುಡಿಸೂ ಬಡದಾಸ
ಪುರಂದರದಾಸರಿಗೆ ಮಡಿ ಮಾಡೊ ದಾಸ
ನಿನ್ನ ನಂಬಿದ ದಾಸ, ಯೆನ್ನ ಬಿಡುವುದು ಮೋಸ
ಕೈವರದ ಪುರನಿವಾಸ, ಅಮರ ನಾರೇಯಣೇಶ"

ಎಂದೂ, ಹಾಗೂ ಮಾಗಡಿ ಕ್ಷೇತ್ರದ ಪ್ರವಾಸ ಕಾಲದಲ್ಲಿ

"ಮರೆಯಲಾರೆನಮ್ಮ ನಮ್ಮ ಮಾಗಡಿ ರಂಗನ ಮರೆಯಲಾರೆನಮ್ಮ" ಮುಂತಾದ ಕೀರ್ತನೆಗಳನ್ನು ರಚಿಸಿ, ಹಾಡಿ, ದಾಸಪಂಥಕ್ಕೂ ಸೇರಿದ ಸಂಗೀತಜ್ಞರಾಗಿದ್ದು ನಾದದ ಪ್ರಣವ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲು ಯತ್ನಿಸಿದ್ದಾರೆ

ಯತೀಂದ್ರರು ರಚಿಸಿರುವ ಗ್ರಂಥಗಳಿಂದ ಉದ್ಧರಿಸಿರುವ ತತ್ತ್ವಗಳು, ಧಾರ್ಮಿಕ ಸಂದೇಶಗಳು, ಕಾಲಜ್ಞಾನದ ಭವಿಷ್ಯವಾಣಿಗಳು ಪಂಡಿತ ಪಾಮರರಿಗೂ, ಭಕ್ತಬಾಂಧವರಿಗೂ ಹಾಗೂ ಶ್ರೀ ಸಾಮಾನ್ಯರಿಗೂ ಅಮೃತ ಸೇಚನದಂತಿವೆ ಅಂತರಂಗದಲ್ಲಿ ಅಡಗಿರುವ ಅಜ್ಞಾನವನ್ನು ತೊಲಗಿಸಿ ಜ್ಞಾನವನ್ನು ಪಡೆಯುವ ಅಡಿಪಾಯವಾಯವಾಗಿದೆ ತತ್ಫಲವಾಗಿ ಭಗವಂತನ ಕೃಪೆಯನ್ನು ಹೊಂದಿ ಆತ್ಮಜ್ಞಾನ ಸಂಪನ್ನರಾಗಿ ಜನ್ಮಸಾಫಲ್ಯ ಹೊಂದಲು ಮಾರ್ಗದರ್ಶಕವಾಗಿವೆ.

# ತಿರುಮಲೆ
# ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

## ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

## ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

ಯೋಗೀಶ್ವರರಾದ ತಾತಯ್ಯನವರು ಆಧ್ಯಾತ್ಮಿಕ ಔನ್ನತ್ಯವನ್ನು ಪಡೆದು ಸಮಾಜಸುಧಾರಕರಾಗಿ ಪೂಜಾರ್ಹರೂ, ಪ್ರಾತಃಸ್ಮರಣೀಯರೂ ಆಗಿ ತುಂಬುದೈವಿಕ ಜೀವನ ನಡೆಸಿ ತಮ್ಮ 114 ನೇ ವಯಸ್ಸಿನಲ್ಲಿ ಎಂದರೆ ಕ್ರಿ ಶ 1840 ನೇ ಇಸವಿ ಜ್ಯೇಷ್ಠ ಶುದ್ಧ ೩ದಿಗೆ ದಿನ ಬೃಂದಾವನಸ್ಥರಾದರು ಅಂದಿನಿಂದ ಇಂದಿನವರೆವಿಗೂ ದಿವ್ಯಚೇತನ ರೂಪಿಗಳಾಗಿ ರಾರಾಜಿಸುತಾ ಶ್ರೀ ಕ್ಷೇತ್ರ ಕೈವಾರವು ಹರಿ – ಹರ – ಬ್ರಹ್ಮಾದಿಗಳ ಕೈವಲ್ಯಧಾಮವೆನಿಸುವಂತೆ ನೆಲೆಸಿದ್ದಾರೆ

ಮಹಿಮಾನ್ವಿತ ಸದ್ಗುರು ತಾತಯ್ಯನವರ ದಿವ್ಯಚೇತನವು ಈ ಪುಣ್ಯಕ್ಷೇತ್ರದಲ್ಲಿ ಭಕ್ತರ ಸದಿಚ್ಛೆಗಳನ್ನು ಪವಾಡ ರೂಪಗಳಲ್ಲಿ ಉಡೇರಿಸುತ್ತಾ ಶ್ರೀ ಸಾಮಾನ್ಯರಿಗೆ ಸಕಲ ಸೌಕರ್ಯಗಳನ್ನೂ, ಸರ್ವಾಭೀಷ್ಟಗಳನ್ನೂ ನೀಡುತ್ತಾ ಸನ್ಮಂಗಳವುಂಟು ಮಾಡುತ್ತಿದೆ

ಶ್ರೀ ಸದ್ಗುರು ತಾತಯ್ಯನವ ದಿವ್ಯ ಪ್ರೇರಣೆ ಎಂಬಂತೆ ಬೆಂಗಳೂರಿನ ಹಲವಾರು ವಿದ್ಯಾಸಂಸ್ಥೆಗಳ ಸಂಸ್ಥಾಪಕರೂ, ಸಾಹಿತ್ಯಾಭಿಮಾನಿಗಳೂ ಧಾರ್ಮಿಕ ಹಾಗೂ ಸಮಾಜ ಸೇವಾ ನಿರತರೂ ಆದ ಶ್ರೀ ಎಂ ಎಸ್ ರಾಮಯ್ಯನವರು ಶ್ರೀ ಆಶ್ರಮದ ಟ್ರಸ್ಟಿನ ಅಧ್ಯಕ್ಷರಾಗಿ ಅನೇಕ ಸುಧಾರಣೆಗಳನ್ನು ಗೈಯುತ್ತಾ ಸದ್ಗುರುವಿನ ಬೃಂದಾವನ ಮಂದಿರಕ್ಕೆ ಲಗುತ್ತಾದಂತೆ ವಿಶಾಲವಾದ ಭವ್ಯ ಪ್ರಾರ್ಥನಾ ಮಂದಿರ, ಮುಖ ಮಂಟಪ, ಧರ್ಮಸತ್ರಗಳು ಯಾತ್ರಾರ್ಥಿಗಳ ವಸತಿ ಗೃಹಗಳು, ಕಲ್ಯಾಣಿ, ವಿಶ್ರಾಂತಿ ಧಾಮ, ಗುರುಕುಲ ವಿದ್ಯಾಭ್ಯಾಸಕ್ಕೆ ತಕ್ಕಂತಹ ಶಾಲೆಗಳು, ಹಾಸ್ಟೆಲ್ ಕಟ್ಟಡಗಳು ಮುಂತಾದವುಗಳ ನಿರ್ಮಾಣ ಕಾರ್ಯದಲ್ಲಿ ಸ್ವಯಂ ನಿರತರಾಗಿ ತಾತಯ್ಯನವರ ಸೇವೆಗೈಯ್ಯುತ್ತಿದ್ದಾರೆ ಹಾಗೂ ತಾತಯ್ಯನವರ 148 ನೇ ಆರಾಧನಾ ಮಹೋತ್ಸವದ ಸಂಧರ್ಭದಲ್ಲಿ 148 ಉಚಿತ ಸಾಮೂಹಿಕ ವಿವಾಹಗಳನ್ನು ಸಹ ನಡೆಸಿ ಕೃತಕೃತ್ಯರಾಗಿದ್ದಾರೆ ಈಗ ಆಶ್ರಮದ ವಾತಾವರಣ ತುಂಬಾ ಪ್ರಶಾಂತವಾಗಿ ಸ್ವರ್ಗಸದೃಶವಾಗಿದೆ ಎಂಬುವುದರಲ್ಲಿ ಸಂಶಯವೇ ಇಲ್ಲ

ಶ್ರೀ ಸದ್ಗುರುತಾತಯ್ಯನವರ ವಾಣಿಯಂತೆ ಶ್ರೀಕ್ಷೇತ್ರವಾದ ಕಲಿಯುಗದ ವೈಕುಂಠಪುರ (ಕೈವಾರ) ವನ್ನು ಸಂದರ್ಶಿಸಿ ಹರಿ, ಹರ ಹಾಗೂ ಸದ್ಗುರುವಿನ ಸೇವೆಗೈದು ಕೃತಾರ್ಥರಾಗಿ ಜನ್ಮ ಸಾಫಲ್ಯವನ್ನು ಹೊಂದೋಣ.

(ವಿವಿಧ ಮೂಲಗಳಿಂದ)

(ಮುಂದುವರೆದದ್ದು)

# ದಾಸರೆಂದರೆ ಪುರಂದರದಾಸರಯ್ಯಾ

ಪುರಂದರದಾಸರು ಬರಿಯ ಅಮೂರ್ತವಾದ ತಾತ್ತ್ವಿಕ ವಿಚಾರಗಳನ್ನು ಮಾತ್ರ ಹೇಳಿದರೆಂದಲ್ಲ. ಲೌಕಿಕ ನಡತೆಯನ್ನೂ ಚಿತ್ರಿಸಿ ನಮಗೆ ಅಮೋಘವಾದ ಲೋಕ ನೀತಿಯನ್ನು ಒದಗಿಸಿದ್ದಾರೆ.

ಮನುಷ್ಯ ಮನ-ಮೆಚ್ಚಿ ನಡೆಯಬೇಕಲ್ಲದೆ ಜನ-ಮೆಚ್ಚಿ ನಡೆದರೆ ಫಲವಿಲ್ಲ. ಅದು ಆತ್ಮವಂಚನೆ. ವೈದಿಕ ಪರಂಪರೆಯ ಬಗ್ಗೆ ಕೇವಲ ಕರ್ಮಠ ಪರಂಪರೆಯ ಟೀಕೆ ಸಾಮಾನ್ಯವಾಗಿ ಕೇಳಿ ಬರುತ್ತದೆ. ಕಪ್ಪೆ ನೀರೊಳಗೆ ಮುಳುಗಿದ ಹಾಗೆ ಪ್ರತಿದಿವಸ ಮೂರುಸಲ ನೀರಿನಲ್ಲಿ ಮುಳುಗು ಹಾಕಿ ಬಕಧ್ಯಾನ ಮಾಡುವ ಹಾಗೆ ಮೂಗು ಹಿಡಿದುಕೊಂಡು ಸಂಧ್ಯಾದಿಗಳಲ್ಲಿ ಗುಣ ಗುಣಿಸಿ ಗೂಟ ನಾಮಗಳನ್ನಿಟ್ಟು ಕೊಳ್ಳುವ ಸಂಪ್ರದಾಯ ಎಂದು ಸಾಮಾನ್ಯವಾಗಿ ಅವಹೇಳನ ಮಾಡುವುದುಂಟು. ಆದರೆ ಇಂದಿನ ಆಧುನಿಕರು ಕೂಡ ಟೀಕಿಸವಷ್ಟು ಕಟುವಾಗಿ ಪುರಂದರದಾಸರು ದಂಬ ಮತ್ತು ಅಸಮತೆಗಳನ್ನು ಟೀಕಿಸಿದ್ದಾರೆ. ಅವರ ಎಷ್ಟೋ ಮಾತುಗಳಲ್ಲಿನ ಉಗ್ರತೆ ಪ್ರಾಯಶಃ ಆಧುನಿಕರಿಗೂ ಬರಲಿಕ್ಕಿಲ್ಲ. 'ತನುವ ನೀರೊಳಗದ್ದಿ ಫಲವೇನು! ಮನದಲ್ಲಿ ದೃಢಭಕುತಿಯಿಲ್ಲದ ಮನುಜನು, ದಾನ-ಧರ್ಮಗಳನ್ನು ಮಾಡುವುದೇ ಸ್ನಾನ, ಹೀನ ಪಾಪಂಗಳ ಬಿಡುವುದೇ ಸ್ನಾನ, ದುಷ್ಟರ ಸಂಗವ ಬಿಡುವುದೆ ಸ್ನಾನ, ಶಿಷ್ಟರ ಸಹವಾಸ ಮಾಡುವುದೇ ಸ್ನಾನ' ಇದನ್ನೆಲ್ಲ ಬಿಟ್ಟು ಬರಿಯ ಧರ್ಮದ ಸೋಗುಹಾಕುವುದು ಉದರ ವೈರಾಗ್ಯ. 'ಉದರವೈರಾಗ್ಯವಿದು-ನಮ್ಮ-ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ, ಉದಯ ಕಾಲದಲೆದ್ದು ಗಡಗಡ ನಡುಗುತ ನದಿಯಲಿ ಮಿಂದೆನೆಂದು ಹಿಗ್ಗುತಲಿ, ಮದಮತ್ಸರ ಕ್ರೋಧ ಒಳಗೆ ತುಂಬಿಕೊಂಡು ............... ಇಂತಹ ಬಾಹ್ಯಾಚಾರವನ್ನು ಪರಮಾತ್ಮ ಮೆಚ್ಚುವುದಿಲ್ಲ, 'ನೆಚ್ಚನಯ್ಯ ಹರಿ ಮೆಚ್ಚನಯ್ಯ ...............ನಿತ್ಯ ಕ್ಕಾಗೆಯ ಹಾಗೆ ನೀರೊಳು ಮುಳುಗುವವಗೆ, ತೊಗಲಿನ ದೇಹಕೆ ಗೋಪೀಗಂಧ ತೇದುಕೊಂಡು ರೋಗ ಬಂದೆಮ್ಮೆಯ ಹಾಗೆ ಬರೆದುಕೊಂಬ ಮನುಜನಿಗೆ ನೆಚ್ಚನಯ್ಯ ಹರಿ ಮೆಚ್ಚನಯ್ಯ...............ಅರ್ಥವಿಲ್ಲದ ಮಡಿ ಯಾವ ದೇವರಿಗೆ ಪ್ರೀತಿ! ಎಂತಲೇ ಕೇಳುತ್ತಾರೆ'- ಮಡಿ ಮಡಿಯೆಂದು ಅಡಗಡಿಗ್ಹಾರುತಿ ಮಡಿಯೆಲ್ಲಿ ಬಂತೋ ಬಿಕನಾಸಿ, ಚರ್ಮವ ತೊಳೆದರೆ ಕರ್ಮವು ಹೋಗ್ವಾದೇ ............ ಬೊಮ್ಮನಯ್ಯ ಪುರಂದರ ವಿಠಲನ ಪಾಡಿ ನಿರ್ಮಲದಿ ಬಾಳೊ ಬಿಕನಾಸಿ'.

ಇಂತಹ ಉದಾರ ಹೃದಯರಿಗೆ ಜಾತಿ ಸೂತಕವಿಲ್ಲ. ಹೊಲೆಹೊಲೆಯೆಂಬುದರ ಬಗ್ಗೆ ದಾಸರು ಸ್ಪಷ್ಟವಾಗಿಯೇ ಹೇಳಿದ್ದಾರೆ. 'ಹೊಲೆಯ ಹೊರಗಿಪ್ಪನೆ ಊರೊಳಗಿಲ್ಲವೆ? ಶ್ರೀಹರಿಯ ಸ್ಮರಣೆಯನು ಬಲ್ಲವರು ಹೇಳಿ.'

ಶೀಲವನು ಕೈಗೊಂಡು ನಡೆಸದಾತನೆ<br>ಹೊಲೆಯ<br>ಪೇಳಿದ ಹರಿಕಥೆಯ ಕೇಳದವ ಹೊಲೆಯ<br>ಆಳಾಗಿ ಅರಸಂಗೆ ಕೇಡು ಬಗೆದವ<br>ಹೊಲೆಯ<br>ಸೂಳೆಯನು ಕಾಮಿಸುವ ಶುದ್ಧ<br>ಹೊಲೆಯ<br>ಕೊಂಡ ಸಾಲಗಳನು ತಿದ್ದದಾತನೆ<br>ಹೊಲೆಯ<br>ಲಂಡತನದಲಿ ನಡೆವ ಭಂಡ ಹೊಲೆಯ<br>ಉಂಡ ಮನೆಗೆರಡ ಬಗೆವಾತನೇ<br>ಹೊಲೆಯ<br>ಹೆಂಡತಿಯ ಇಚ್ಛೆಯವ ಹೇಡಿ<br>ಹೊಲೆಯ

ಮನಸ್ಸಿನ ಈ ಹೊಲೆತನದ ಸ್ವರೂಪ ದಾಸರಿಗೆ ಗೊತ್ತಿದ್ದುದರಿಂದಲೇ ಹುಟ್ಟಿನಿಂದ ಬ್ರಾಹ್ಮಣರಾಗಿರದಿದ್ದರೂ ಅಪರೋಕ್ಷ ಜ್ಞಾನಿಗಳಾದ ಕನಕದಾಸರ ಬಗ್ಗೆ ಅವರಿಗೆ ಅಪಾರ ಗೌರವವಿದೆ. ಕನಕದಾಸರ ಪರಿಪೂರ್ಣ ಜ್ಞಾನದ ಬಗ್ಗೆ ಪುರಂದರರು ಇಡೀ ಕಥೆಯನ್ನೇ ಕೊಡುತ್ತಾರೆ. 'ಕನಕದಾಸನ ಮೇಲೆ ದಯೆಮಾಡಲು ವ್ಯಾಸ ಮುನಿ ಮಠದವರೆಲ್ಲ ದೂರಿಕೊಂಬುವರೊ; ತೀರ್ಥವನು ಕೊಡುವಾಗ ಕನಕನ್ನ ಕರೆಯೆಸಲು ಧೂರ್ತರಾಗಿದ್ದ ವಿದ್ವಾಂಸರೆಲ್ಲ ಸಾರ್ಥಕಾಯಿತು ಇವರ ಸನ್ಯಾಸಿತನವೆಲ್ಲ, ಪೂರ್ತ್ಯಾಗಲೆಂತೆನಲು ಯತಿಯು ನಗುತಿದ್ದನು'. ಈ ಇಡೀ ಕಥೆ ಅಥವಾ ಪ್ರಸಂಗ



ಡಾ॥ ರಾ. ಯ. ಧಾರವಾಡಕರ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಕನಕದಾಸರು, ವ್ಯಾಸರಾಯರು ಹಾಗೂ ಪುರಂದರದಾಸರುಗಳ ಹೃದಯ ಶ್ರೀಮಂತಿಕೆಯನ್ನು ತೋರುತ್ತದೆ.

ಆದ್ದರಿಂದ ಇಂಥ ಮಾನಸಿಕ ಸ್ಥಿತಿ ಬರಬೇಕಾದರೆ ಸಜ್ಜನರ ಸಂಗ ಮಾಡಬೇಕು. ದುರ್ಜನರನ್ನು ದೂರವಿಡಬೇಕು. ದುರ್ಜನರು ಯಾವುದಕ್ಕೂ ಉಪಯೋಗವಿಲ್ಲ. ಅವರು ತೊಂದರೆಗೆ ಕಾರಣರೇ ಹೊರತು ಅವರಿಂದ ಕಿಂಚಿತ್ತೂ ಪ್ರಯೋಜನವಿಲ್ಲ. 'ಜಾಲಿಯಮರದಂತೆ ಧರೆಯೊಳು ದುರ್ಜನರು, ಮೂಲಾಗ್ರ ಪರಿಯಂತ ಮುಳ್ಳು ಕೂಡಿಪ್ಪಂಥ ದುರ್ಜನರು ಜಾಲಿಯ ಮರದಂತೆ'. ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಿಲ್ಲ. ಹಸಿದು ಬಂದವರಿಗೆ ಹಣ್ಣು ಇಲ್ಲ ಕುಸುಮ ವಾಸನೆಯಿಲ್ಲ, ಕೂಡಲು ಸ್ಥಳವಿಲ್ಲ. ರಸದಲ್ಲಿ ಸ್ವಾದವು ವಿಷದಂತೆ ಇರುತಿಹ ಜಾಲಿಯ ಮರದಂತೆ ದುರ್ಜನರು.'

ಮಾನವ ಇದ್ದಾಗ ಒಳ್ಳೆಯ ಕೆಲಸ ಮಾಡಬೇಕು. ದಾನಧರ್ಮ ಮಾಡಬೇಕು. ಕೆಲಸಗಳ್ಳಿಗೆ ಕೂಸಿನ ನೆಪ ಇದ್ದಹಾಗೆ, ಪಾಪಿಷ್ಟಳು ದಾನ ಕೊಡದೆ ಹೋಗಲು ನೂರು ನೆಪ ಹೇಳುತ್ತಾಳೆ. ಪರಮಾತ್ಮನ ಸಂದೇಶವಾಹಕರಾದ ಹರಿದಾಸರು ಬಂದು ಮನೆಯಬಾಗಿಲಿಗೆ ಬಂದು ನಿಂತರೆ ಒಂದು ಹಿಡಿ ಅಕ್ಕಿ ಹಾಕುವ ಔದಾರ್ಯ ಈ ಹೆಣ್ಣು ಮಕ್ಕಳಲ್ಲಿಲ್ಲ. 'ಇಕ್ಕಲಾರೆ ಕೈಯೆಂಜಲು, ಚಿಕ್ಕ ಮಕ್ಕಳು ಅಳುತಾರೆ ಹೋಗೋ ದಾಸಯ್ಯ, ಮನೆಯ ಸಾರಿಸುತೇನೆ, ಮಡಕೆ ತೊಳೆಯುತೇನೆ ಮನೆಯೊಳಗಾರಿಲ್ಲ ಹೋಗೋ ದಾಸಯ್ಯ, ತನಯರು ಅಳುತಾರೆ, ನಿನದೇನು ಕಾಟವು ಕ್ಷಣಹೊತ್ತು ನಿಲ್ಲದೆ ಹೋಗೋ ದಾಸಯ್ಯ', ಹೀಗೆ ಎಂಜಲಕೈಯಿಂದ ಕಾಗೆಯನ್ನು ಸಹ ಓಡಿಸದ ಈ ಪಾಪಿನಿ ದಾಸರನ್ನು ಸಾಗಹಾಕುತ್ತಾಳೆ.

ದಾಸರು ಬಾಗಿಲಿಗೆ ಬಂದರೆ ಈ ಪುಣ್ಯಾತ್ಮಳು ಏನಾದರೂ ನೆಪ ಹೇಳಿ ಸಾಗಿಸುವುದರ ಔದಾರ್ಯವನ್ನಾದರೂ ಹೊಂದಿದವಳಾಗಿದ್ದಾಳೆ. ಕೆಲವರಂತೂ ದಾಸರ ಕಾಲಿನ ಗೆಜ್ಜೆಯ ಸಪ್ಪಳ ಕೇಳಿದ ಕೂಡಲೇ ಮನೆಯ ಬಾಗಿಲನ್ನು ದಢಾರ್ ಎಂದು ಹಾಕಿಕೊಳ್ಳುತ್ತಾರೆ. ಇಂತಹ ಪುಣ್ಯಾತ್ಮರ ಬಗ್ಗೆ ದಾಸರು ತುಂಬಾ ಕಾವ್ಯಮಯವಾಗಿ, ವ್ಯಂಗ್ಯವಾಗಿ ಹೇಳಿದ್ದಾರೆ. ಆಕೆ ಬಾಗಿಲು ಹಾಕಿದ ಕೂಡಲೇ ಚಿಲಕ ಅಲ್ಲಾಡುತ್ತದೆ.

'ಕದವ ಮುಚ್ಚಿದಳಿದೆಕೊ ಗಯ್ಯಾಳಿ ಮೂಳಿ, ಕದವ ಮುಚ್ಚಿದಳಿದೆಕೊ ಚಿಲಕ ಅಲ್ಲಾಡುತ್ತಿದೆ. ಒಳಗಿದ್ದ ಪಾಪವು ಹೋದೀತು ಹೊರಗೆಂದು ಕದವ ಮುಚ್ಚಿದಳಿದೆಕೊ, ಭಾರತ, ರಾಮಾಯಣ ಪಾಂಚರಾತ್ರಾಗಮ ಸಾರಸ್ವತ ಬಂದು ಸೇರಿತೆಂದು ಕದವ ಮುಚ್ಚಿದಳು. ನಂದನ ಕಂದ ಗೋವಿಂದ ಮುಕುಂದನ ಚಂದವಾದ ಧ್ವನಿ ಹೋದೀತು ಕರ್ಣಕೆಂದು - ಕದವ ಮುಚ್ಚಿದಳು' ಅರಸರಿಗೆ ಚಾಮರ ಹಾಕುವುದರ ಬಗ್ಗೆ ಬಾಣ ಕವಿ ಒಂದು ಮಾತನ್ನು ಹೇಳುತ್ತಾನೆ. ಅರಸನ ಸುತ್ತಲೂ ನಿಂತ ಸೇವಕ ಸೇವಿಕೆಯರು ಅವನ ಎಡಬಲದಲ್ಲಿ ನಿಂತು ಹೊರಗಿನ ಒಳ್ಳೆಯ ಮಾತುಗಳು ಅವನ ಕಿವಿ ಸೇರಬಾರದೆಂದು ಚಾಮರ ಹಾಕುತ್ತಾರಂತೆ. ಹಾಗೆಯೇ ಒಳಗಿದ್ದ ಪಾಪವು ಹೊರಗೆ ಹೋಗಬಾರದೆಂದು ಈಕೆ ಬಾಗಿಲು ಮುಚ್ಚುತ್ತಾಳೆ.

ಒಂದು ರೀತಿಯಲ್ಲಿ ಇದು ಯಾರ ತಪ್ಪೂ ಅಲ್ಲ. ದಿವಸಗಳೇ ಹಾಗೆ ಬಂದಿವೆ. ನಿಂದ ನೆಲದ ಗುಣವೋ, ಬಂದ ಕಾಲದಗುಣವೊ ಅಂತೂ ಹೃದಯ ವೈಶಾಲ್ಯಕ್ಕೆ ಆಸ್ಪದವಿಲ್ಲ. 'ಧರ್ಮಕ್ಕೆ ಕೈಬಾರದೀಕಾಲ, ಪಾಪ ಕರ್ಮಕೆ ಮನಸೋಲೋದೀಕಾಲ, ದಂಡ ದ್ರೋಹಕೆ ಉಂಟು, ಪುಂಡು ಪೋಕರಿಗುಂಟು ಹೆಂಡತಿ ಮಕ್ಕಳಿಗಿಲ್ಲವೀ ಕಾಲ, ದಿಂಡೇರಿಗುಂಟು. ಜಗಭಂಡರಿಗುಂಟು, ಅಂಡಲೆಗರಿಗಿಲ್ಲವೀಕಾಲ, ತೊತ್ತೇರಿಗುಂಟು ತಾಟಕಿಗುಂಟು, ಹೆತ್ತ ತಾಯಿಗಿಲ್ಲವೀಕಾಲ', ಹುಸಿ ದಿಟವಾಯಿತು ರಸಕಸವಾಯಿತು ಇದು ಕಾಲಗುಣ.

ಅದಕ್ಕಾಗಿಯೇ ದಾಸರು ಕೈಯೆತ್ತಿ ವ್ಯಾಸರ ಮಾತು ಹೇಳುತ್ತಾರೆ. "ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿತ್, ಶ್ರುಣೋತಿ ಮಾಮ್, ಧರ್ಮಾತ್ ಅರ್ಥಶ್ಚ

# ಸಪ್ತಗಿರಿ

**ಬರಹಗಾರರಿಗೆ ಸೂಚನೆ:**

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಕಾಮಶ್ಚ, ತತ್ ಕಿಮರ್ಥಂ ನ ಸೇವ್ಯತೇ?" ವ್ಯಾಸರು ಹೇಳಿದರು – 'ನಾನು ಕೈಯೆತ್ತಿ ಸಾರುತ್ತೇನೆ. ಆದರೂ ಯಾರೂ ನನ್ನ ಮಾತು ಕೇಳುವುದಿಲ್ಲ, ಧರ್ಮದಿಂದಲೇ ಅರ್ಥ ಕಾಮ ಎರಡೂ ಸಿಗುತ್ತವೆ. ಯಾಕೆ ಜನ ಈ ಧರ್ಮವನ್ನು ಸೇವಿಸುವುದಿಲ್ಲ', ಹೀಗೆಯೇ ದಾಸರು ಹತ್ತಾರು ವಿಧದಲ್ಲಿ ನಮಗೆ ಎಚ್ಚರಿಕೆ ನೀಡಿದ್ದಾರೆ.

'ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ, ನಿಶ್ಚಯವೆಚ್ಚರಿಕೆ. ಪೊಡವಿಪನೊಲುಮೆಯ ಕಡುನೆಚ್ಚಿ ಗರ್ವದಿ ನಡೆಯುವಿರೆಚ್ಚರಿಕೆ; ಕೊಡನ ಅಂಧಕ ಪೊತ್ತು ನಡೆವಂತೆ ಅಧಿಕಾರ ಕಡೆಯಲ್ಲ ಎಚ್ಚರಿಕೆ, ಕಡುಜಳಕನು ನಾನೆನುತ್ತ ಪರರ ಅವಘಡಿಸದಿರೆಚ್ಚರಿಕೆ, ಬಡಬಗ್ಗರ ಬಾಯಿಬಡಿದು ಪಾಪದಿ ಹೆಜ್ಜೆ ಇಡಬೇಡ. ಎಚ್ಚರಿಕೆ, ದೊರೆ ಎನ್ನ ಬಲವು ಸುಸ್ಥಿರವೆಂದೆಲ್ಲರ ಹಗೆ ತರವಲ್ಲ ಎಚ್ಚರಿಕೆ, ಉರಗನ ಮುತ್ತಿ ಕಟ್ಟಿರುವೆಯು ಕೊರೆದಂತ ತೆರನಪ್ಪುದೆಚ್ಚರಿಕೆ. (ಎಂತಹ ಸುಂದರವಾದ ಉಪಮೆ – ಇವನಿಗೆ ಇವ ಬುಸುಗುಡುವ ಹಾವು, ಹೆಡೆಯೆತ್ತಿಯೇ ನಿಂತಿರುತ್ತಾನೆ. ಯಾರಾದರೂ ಸ್ವಲ್ಪ ತಿರುಗಿ ನೋಡಿದರೆ ಸಾಕು ಫೂತ್ಕರಿಸುತ್ತಾನೆ. ಆದರೆ ಈ ಘಟಸರ್ಪಕ್ಕೆ ಸ್ವಲ್ಪ ಗಾಯವಾದರೂ ಸಾಕು, ಕಟ್ಟಿರುವೆಯಂತಹ ಕ್ಷುದ್ರಜಂತುವೂ ಸಹ ಇವನನ್ನು ತಿಂದು ಮುಗಿಸಿಬಿಡುತ್ತದೆ).

ಅಧಿಕಾರ, ಹಣ, ದರ್ಪ, ಮೋಹ, ಭೋಗ ಇವೆಲ್ಲ ಅನಿತ್ಯ, ಅಶಾಶ್ವತ. ಕೊನೆಯವರೆಗೂ ನಮ್ಮೊಂದಿಗೆ ಬರುವುದು–ಧರ್ಮಃ ತಮನುಗಚ್ಛತಿ. ಅದಕ್ಕೇ ದಾಸರು ಹೇಳುತ್ತಾರೆ.

'ಧರ್ಮವೆ ಜಯವೆಂಬ ದಿವ್ಯಮಂತ್ರ ಮರ್ಮವನರಿತು ಮಾಡಲುಬೇಕು ತಂತ್ರ, ವಿಷವಿಕ್ಕಿದವಗೆ ಷಡ್ರಸವಿಕ್ಕಲು ಬೇಕು, ದ್ವೇಷ ಮಾಡಿದವನ ಪೋಷಿಸಲು ಬೇಕು, ಪುಸಿಯಾಡಿ ಕೆಡಿಸುವವನ ಹಾಡಿ ಹರಸಲು ಬೇಕು. ಮೋಸ ಮಾಡುವವನ ಹೆಸರ ಮಗನಿಗಿಡಬೇಕು. ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು'. ಇದು ಇರಬೇಕಾದ ನಿಜವಾದ ಜೀವನ ರೀತಿ.

'ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ' – ಎಂದು ಬಸವಣ್ಣನವರು ತಿಳಿಯಾದ ಕನ್ನಡದಲ್ಲಿ ಜೀವನ ಮಾರ್ಗದರ್ಶಕ ಸೂತ್ರಗಳನ್ನು ಹೇಳಿದರು. ಹಾಗೆಯೇ ಪುರಂದರರೂ ಸಹ ನಾವು ಜೀವನದಲ್ಲಿ ಹೇಗಿರಬೇಕೆಂಬುದನ್ನು ತಿಳಿಯಾದ ವಾಕ್ಯಗಳಲ್ಲಿ ಹೇಳಿದ್ದಾರೆ.

'ಹೇಗಿರಬೇಕು ಸಂಸಾರದಲ್ಲಿ ಹೀಗೆ ಬರೆದಿತ್ತು ಪ್ರಾಚೀನದಲ್ಲಿ, ಆಡುವ ಮಕ್ಕಳು ಮನೆಯ ಕಟ್ಟಿದರು, ಆಡಿ ಸಾಕೆಂದು ಮುರಿದು ಓಡಿದರು. ಸಂತೆಯು ನೆರೆಯಿತು ನಾನಾಪರಿ, ಪಾಂಥಸ್ಥರ್‍ಹ್ಯೋದರು ತಂತಮ್ಮ ದಾರಿ, ಹಕ್ಕಿ ಬಂದಿತ್ತು ಅಂಗಳದಲ್ಲಿ, ಹಾರಿಹೋಯಿತು ಆ ಕ್ಷಣದಲ್ಲಿ, ವಸ್ತಿಗಾರನು ವಸ್ತಿಗೆ ಬಂದ, ಹೊತ್ತಾರೆ ಎದ್ದು ಹೊರಟು ಹೋದ,' ಈ ಜಗತ್ತಿನ ಧರ್ಮಶಾಲೆಯಲ್ಲಿ ನಾಲ್ಕು ದಿನ ಇದ್ದುಹೋಗಲು ನಾವು ಬಂದಿದ್ದೇವೆ. ನಾಲ್ಕುದಿನ ಮಾತ್ರವಿದ್ದು ಗಂಟು ಮೂಟೆ (ಪಾಪಪುಣ್ಯಗಳದ್ದು) ಕಟ್ಟಿಕೊಂಡು ಹೊರಡಲು ಸಿದ್ಧರಿರಬೇಕು. ಇಲ್ಲಿಯೇ ಝಂಡಾ ಊರಲು ಬಂದಿಲ್ಲ. ಅಷ್ಟರಲ್ಲಿಯೇ ಹರಿ ಎನ್ನೋ ಮನವೇ! 'ಇನ್ನೂ ನನಗೆ ವಯಸ್ಸಿದೆ, ವಯಸ್ಸಾಗಲಿ ನೋಡೋಣ' ಎಂದು ಧರ್ಮಜೀವನದ ಬಗ್ಗೆ ಮುದ್ದತು ಕೇಳಲು ಬರುವುದಿಲ್ಲ. ಸಾಯುವಾಗ ಹರಿ ಎಂದರೆ ಹೆಣವೇನು ದೇವರಿಗೆ ಬಿಟ್ಟಿ ಬಿದ್ದಿತ್ತೇ! 'ತದಲಂ ಬಹುಲೋಕ ವಿಚಿಂತಯಾ ಪ್ರಣವಂ ಕುರು ಮಾನಸಮೀಶಪದೇ' ಒಳ್ಳೆಯದನ್ನು ಈಗಲೇ ಮಾಡಬೇಕು. ಇಲ್ಲದಿದ್ದರೆ ಬುಟ್ಟಿಯಲ್ಲಿದ್ದ 'ಹಣ್ಣು ಕೊಳೆಯುತ್ತದೆ'. ತಾಸು ಬಾರಿಸುತಿದೆ ಕೇಳಿ, ಕಂಡ ಕಂಡ ವಿಷಯವ ಕಾಮಿಸಿ ಕಷ್ಟವ ಪಡದೆ, ತಾಂಡವ ಶ್ರೀಕೃಷ್ಣನ ಭಜಿಸಿ ಪುಂಡರೀಕಾಕ್ಷನ, ಪುರಾಣಪುರುಷನ, ಪುರಂದರವಿಠಲನ ಭಜಿಸಿ ಬದುಕಿರೆಂದು ಢಣ್ ಢಣ್ ಎಂದು ತಾಸು ಬಾರಿಸುತಿದೆ ಕೇಳಿರೋ.




# ಆರ್ಜಿತ ಅಭಿಷೇಕ
# ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

## ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಆರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

# ವಾರ್ತಾಲಹರಿ

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ತಿರುಪ್ಪಾವೈ

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಧನುರ್ಮಾಸದ ಪ್ರಯುಕ್ತ ಸುಪ್ರಭಾತದ ಬದಲು 'ತಿರುಪ್ಪಾವೈ'ಯನ್ನು ಡಿಸೆಂಬರ್ 16 ರಿಂದ ಜನವರಿ 14–1984 ವರೆಗೆ ದಿನವೂ ಬೆಳಗ್ಗೆ ಹಾಡಲಾಗುವುದು. ಧನುರ್ಮಾಸ ದರ್ಶನ ಹಾಗೂ ಸರ್ವದರ್ಶನಗಳು ಈ ದಿನಗಳಲ್ಲಿ ಬೆಳಗ್ಗೆ 6 ಗಂಟೆಗೆ ಆರಂಭವಾಗುತ್ತದೆ ಎಂದು ದೇವಸ್ಥಾನದ ಪ್ರಕಟನೆಯೊಂದು ತಿಳಿಸುತ್ತದೆ.



## ಪುಷ್ಪಯಾಗ

ಶ್ರೀ ವೆಂಕಟೇಶ್ವರ ಸ್ವಾಮಿಯ ವಾರ್ಷಿಕ ಪುಷ್ಪಯಾಗ ನವಂಬರ್ 12 ರಂದು ವೈಭವೋಪೇತವಾಗಿ ನಡೆಯಿತು. ಅಂದು ಬೆಳಗ್ಗೆ ದೈನಂದಿನ ಪೂಜಾಕಾರ್ಯಕ್ರಮಗಳ ನಂತರ ಉತ್ಸವ ಮೂರ್ತಿಯನ್ನು ಬಂಗಾರದ ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಿ ಯಾಗಶಾಲೆಗೆ ತರಲಾಯಿತು. ಅರ್ಜಿತ ಸೇವಾದಾರರ ಸಮಕ್ಷಮದಲ್ಲಿ ವೇದ ಮಂತ್ರೋಚ್ಚಾರಣೆಯ ನಡುವೆ ಸಹಸ್ರ ಧಾರಾಭಿಷೇಕ ಮಾಡಿದರು. ವಿಶ್ರಾಂತಿಯ ನಂತರ ಸ್ವಾಮಿಯನ್ನು ಧ್ಯಾನ ಪೀಠದ ಮೇಲೆ ಆಸೀನಗೊಳಿಸಿ ವಿವಿಧ ರೀತಿಯ ಪುಷ್ಪಗಳನ್ನು ಸಮರ್ಪಿಸುತ್ತಿರಲು ಯಾಗಶಾಲೆಯಲ್ಲಿ ಪುರೋಹಿತರು ವಿಷ್ಣುಗಾಯತ್ರಿ ಮಹಾಮಂತ್ರವನ್ನು ಜಪಿಸುತ್ತ ನೂರಾ ಎಂಟು ಬಿಲ್ವಪತ್ರೆಗಳನ್ನು ಸಮರ್ಪಿಸಿದರು. ಒಟ್ಟು, ಹನ್ನೆರಡೂವರೆ ಸಾವಿರ ಕಿಲೊ ಹೂವುಗಳನ್ನು ಈ ಯಾಗಕ್ಕೆ ಬಳಸಲಾಯಿತು. ಶ್ರೀ ವೆಂಕಟೇಶ್ವರಸ್ವಾಮಿ ಭೂಮಿಗಿಳಿದು ಬಂದ ಶ್ರವಣ ನಕ್ಷತ್ರದಂದು ನಡೆದ ಈ ಪುಷ್ಪಯಾಗಕ್ಕೆ 15 ಮಂದಿ ಭಕ್ತರು ಅರ್ಜಿತ ಶುಲ್ಕವನ್ನು ಸಲ್ಲಿಸಿದ್ದರು. ಸುಮಾರು ನಾಲ್ಕು ನೂರು ವರ್ಷಗಳ ಹಿಂದೆ ನಡೆದಿದ್ದ ಈ ಪುಷ್ಪಯಾಗವನ್ನು ಮೂರುವರ್ಷದ ಕೆಳಗೆ ತಿ. ತಿ. ದೇ. ಪುನಃ ಆರಂಭಿಸಿತು. ನಂತರ ಅರ್ಜಿತಸೇವೆಯನ್ನಾಗಿ ಪರಿವರ್ತಿಸಲಾಯಿತು.

ಅಂದು ನಡೆದ ಪುಷ್ಪಯಾಗದೊಡನೆ ನಡೆದ ಸಹಸ್ರ ದೀಪಾಲಂಕರಣ ಸೇವೆಯಲ್ಲಿ ಏಳುಮಂದಿ ಅರ್ಜಿತಸೇವಾದಾರರು ಭಾಗವಹಿಸಿದ್ದರು. ತಿ.ತಿ. ದೇವಸ್ಥಾನಗಳ ಉಪವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ ಹೂವುಗಳ ಸಂಗ್ರಹಣೆಯಲ್ಲಿ ವಿಶೇಷ ಶ್ರದ್ಧೆಯನ್ನು ತೋರಿದರು. ಇಡೀ ಯಾಗವನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರ ಸ್ವಾಮಿ ರೆಡ್ಡಿಯವರು ಪರ್ಯವೇಕ್ಷಿಸಿದರು.

ಅಂದು ವಿಪರೀತವಾದ ಯಾತ್ರಿಕ ಸಂದಣಿಯುಂಟಾಗಿ ನಲವತ್ತು ಸಹಸ್ರಕ್ಕೂ ಮೀರಿದ ಯಾತ್ರಿಕರು ಸ್ವಾಮಿಯ ದರ್ಶನ ಮಾಡಿದರು. ಈ ಕಾರಣದಿಂದಾಗಿ ದೇವರ ದರ್ಶನದ ಸರತಿಯ ಸಾಲಿನ ಉದ್ದ ಹೆಚ್ಚಾಗಿದ್ದಿತು. ಮಾರನೆಯ ದಿನವೂ ಮೂವತ್ತೆರಡು ಸಹಸ್ರಮಂದಿ ಸ್ವಾಮಿ ದರ್ಶನ ಮಾಡಿದರು.

ಪುಷ್ಪಯಾಗದಂದು ಯಾಗದಿಂದ 52.5 ಸಹಸ್ರರೂ, ಸಹಸ್ರ ದೀಪಾಲಂಕರಣ ಸೇವೆಯಿಂದ 14 ಸಹಸ್ರರೂ, ವಿಶೇಷ ಪ್ರವೇಶದ ಟಿಕೆಟ್‌ನಿಂದಾಗಿ 1,21,005 ರೂ, ಹುಂಡಿಯಿಂದಾಗಿ 3,65,210 ರೂ ಗಳಾಗಿ, ಒಟ್ಟು ಆದಾಯ 5.5 ಲಕ್ಷ ರೂಗಳನ್ನು ಮೀರಿದ್ದಿತು.



ಆಸ್ಥಾನ ಪಂಡಿತ ಶ್ರೀ ಜಗನ್ನಾಥಾಚಾರ್ಯರೊಂದಿಗೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ

## ಆಸ್ಥಾನ ಪಂಡಿತರಿಗೆ ಶೇಷವಸ್ತ್ರ ಗೌರವ

ತಿರುಮಲೆ ತಿರುಪತಿ ದೇವಸ್ಥಾನಗಳ ಆಸ್ಥಾನ ಪಂಡಿತ ಶ್ರೀ ವೇದಾಂತಂ ಜಗನ್ನಾಥಾಚಾರ್ಯುಲು ಅವರನ್ನು ಈಚೆಗೆ ಶ್ರೀ ವೆಂಕಟೇಶ್ವರ ಸ್ವಾಮಿಯ ಶೇಷವಸ್ತ್ರದಿಂದ ಸನ್ಮಾನಿಸಲಾಯಿತು.

1955 ರಿಂದ ತಿ. ತಿ. ದೇವಸ್ಥಾನಗಳ ಆಸ್ಥಾನ ಪಂಡಿತರಾಗಿ ತಿರುಮಲೇಶ್ವರನ ವಿವಿಧ ಸೇವೆ, ಉತ್ಸವಗಳಲ್ಲಿ ದೇವಾಲಯಕ್ಕೆ ಆಗಮೋಕ್ತ ಸಲಹೆಗಳನ್ನು ನೀಡುತ್ತ ವಿವಿಡೆಡೆಗಳಲ್ಲಿ ಶ್ರೀನಿವಾಸ ದೇವಾಲಯ ನಿರ್ಮಾಣ ವಿಗ್ರಹ ಪ್ರತಿಷ್ಠೆಗಳಲ್ಲಿ ಮಾರ್ಗದರ್ಶನ ನೀಡುತ್ತ ಬಂದಿರುವ ಈ 90 ವರ್ಷದ ವಯೋವೃದ್ಧರು ಆಗಮ ಶಾಸ್ತ್ರ, ಅಲಂಕಾರ, ವ್ಯಾಕರಣ ಮೊದಲಾದ ವಿವಿಧ ಪ್ರಾಕಾರಗಳ ಅಧ್ಯಯನದಲ್ಲಿ ಅತ್ಯುತ್ತಮರೆಂದು ಹಲವಾರು ಮನ್ನಣೆಗಳನ್ನು ಗಳಿಸಿದ್ದು ವೈಖಾನಸ ಕಲ್ಪಸೂತ್ರಗಳನ್ನು ಸಂಪಾದಿಸಿ, ತಿರುಮಲೆಯ ಸ್ವಾಮಿಯ ಉತ್ಸವಗಳನ್ನು ವಿವರಿಸುವ 'ಶ್ರೀ ವೆಂಕಟೇಶ್ವರ ವೈಭವಂ' ಕೃತಿಯನ್ನು ರಚಿಸಿದ್ದಾರೆ. (ತಿ. ತಿ. ದೇ. ಪ್ರಕಟನೆ) ಪೀಠಾಪುರಂ ಸಂಸ್ಥಾನದ ಆಸ್ಥಾನ ಪಂಡಿತರಾಗಿ ಅತಿ ಕಿರಿಯ ವಯಸ್ಸಿನಲ್ಲೇ 17 ವರ್ಷಗಳ ಕಾಲ ಕೆಲಸಮಾಡಿದ ನಂತರ ಅನೇಕ ರಾಜರುಗಳಲ್ಲಿ ವಿದ್ವತ್ ಸಭೆ, ಸಮ್ಮೇಳನಗಳಲ್ಲಿ, ಪೀಠಾಧಿಪತಿಗಳಲ್ಲಿ ವಿವಿಧರೀತಿಯ ಸನ್ಮಾನ ಬಿರುದುಗಳನ್ನು ಪಡೆದವರಾಗಿದ್ದಾರೆ.

## ಗ್ರಂಥಾವಿಷ್ಕರಣ

ತಿರುಮಲೆ ತಿರುಪತಿ ದೇವಸ್ಥಾನಗಳ ಧಾರ್ಮಿಕ ಗ್ರಂಥ ಪ್ರಕಾಶನ ಸಹಾಯನಿಧಿಯಿಂದ ನೆರವು ಪಡೆದು ಪ್ರಕಟವಾದ 'ಅನ್ನಮಾಚಾರ್ಯ ಸಂಕೀರ್ತನಾಮೃತ' ಹಾಗೂ 'ಪ್ರಬೋಧ ಚಂದ್ರೋದಯ ತುಲನಾತ್ಮಕ ವಿಮರ್ಶ' ಕೃತಿಗಳು ಅನ್ನಮಾಚಾರ್ಯ ಕಳಾಮಂದಿರದಲ್ಲಿ ಕರುಣಶ್ರೀ ಅವರ ಅಧ್ಯಕ್ಷತೆಯಲ್ಲಿ ಬಿಡುಗಡೆಯಾದವು. ಅನ್ನಮಾಚಾರ್ಯ ಸಂಕೀರ್ತನಾಮೃತಮು (ಸಮುದ್ರಾಲ ಲಕ್ಷ್ಮಣಯ್ಯ) ಕೃತಿಯನ್ನು ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಯವರೂ, 'ಪ್ರಬೋಧ ಚಂದ್ರೋದಯ ವಿಮರ್ಶೆಯನ್ನು' (ಮಲ್ಲೆಲ ಗುರವಯ್ಯ) ಶ್ರೀ ರಾವೂಲ ಸೂರ್ಯನಾರಾಯಣಮೂರ್ತಿಯವರೂ [illegible] ಮಾಡಿದರು. ಸರ್ವಶ್ರೀ ಮುದಿವರ್ತಿ ಕೊಂಡಮಾಚಾರ್ಯ ಕೆ. ಸರ್ವೋತ್ತಮರಾವ್, ಜಾಸ್ತಿ ಸೂರ್ಯನಾರಾಯಣ ಮೊದಲಾದವರು ಮೇಲಿನ ಕೃತಿಗಳು ಹಾಗೂ ಕೃತಿಕಾರರನ್ನು ಪರಿಚಯಿಸಿ ಪ್ರಶಂಸಿದರು.

## ರಕ್ಷಾಪತ್ರ ಚಿತ್ರಸೂಚಿ

ಮುಖಪುಟ: ಶ್ರೀ ವೆಂಕಟೇಶ್ವರಸ್ವಾಮಿ.

ಹಿಂಬದಿಯ ಪುಟ: ಹೂವಿನಲ್ಲಿ ಪದ್ಮಾವತಿ ಅಮ್ಮನವರ ಚಿತ್ರ, ತಿರುಮಲೆ.

ಒಳಪುಟಗಳಲ್ಲಿ: ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಹಾಗೂ ಶ್ರೀನಿವಾಸ ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಚಿತ್ರಗಳು.

---

(4 ನೇ ಪುಟದಿಂದ)

ಅಷ್ಟೇಕೆ! ಜಡಚೇತನ ಸಮ್ಮಿಳಿತ ವಿಶಾಲ ವಿಶ್ವಕ್ಕೆ ಆದಿತ್ಯನೇ ಕರ್ತ, ಭರ್ತ, ಹರ್ತ, ಸಾಕ್ಷಿ ಮಾತ್ರವೇ ಅಲ್ಲ ಭೌತಿಕ ಪಾರಲೌಕಿಕ ಫಲಪ್ರದಾತ. ಋಗ್ಯಜುಸ್ಸಾಮಪಾರಂಗತನೆಂದು ಸ್ತುತಿಪಡೆದ ಈ ಅದ್ಭುತ ತೇಜಃಪುಂಜ ತನ್ನ ಕ್ರಮಗತಿಯಲ್ಲಿ ದಕ್ಷಿಣಾಯನದಲ್ಲಿ ಲೌಕಿಕ ಪ್ರಯೋಜನಗಳಿಗೂ, ಉತ್ತರಾಯಣದಲ್ಲಿ ಪುಣ್ಯಪ್ರಾಪ್ತಿಗೂ ಕಾರಣ. ಇದು ಮಕರಸಂಕ್ರಮಣ ಕಾಲ. ಐಹಿಕವಾಗಿಯೂ ಅಧಿಕ ವೈಭವಪ್ರದ, ಲಕ್ಷ್ಮೀಪ್ರದ. ಆ ಪ್ರತ್ಯಕ್ಷದೈವದ ಮಾತು ಏನೇ ಇದ್ದರೂ, ಅವಲಕ್ಷಣಗಳಿಂದ ಕೃತಘ್ನತಾ (ಆಗುತ್ತಿರುವ ಒಳ್ಳೆಯ ಕಾರ್ಯವನ್ನು ಅದೇ ಕೆಲಸವೆಂಬಂತೆ ಕೆಡಿಸುವುದು) ಮಕರವನ್ನು ದಾಟಿ ಹೊರಡುವ ಶಕ್ತಿ ನಿತ್ಯಶಂಕಾಪರನಾದ ಮಾನವ ಜ್ಞಾನ ಭಾಸ್ಕರ ರೂಪಿಗೆ ಇನ್ನೂ ಬರಲಿಲ್ಲ. ಎಂತಲೇ 'ಕೃತಘ್ನಘ್ನ'ನೆಂಬ ಯಾವ ದೇವತೆಗೂ ಇಲ್ಲದ ಹೆಸರು ಪಡೆದ ಆ ಆದಿತ್ಯರೂಪೀ ಪರದೇವತೆಯನ್ನು ನಮ್ಮ ಸಮುಸ್ಥಾಮಕರ ದಳನಕ್ಕಾಗಿ ಪ್ರಾರ್ಥಿಸುವ.

ತಮೋಘ್ನಾಯ ಹಿಮಘ್ನಾಯ ಶತ್ರುಘ್ನಾಯಾಮಿತಾತ್ಮನೇ
ಕೃತಘ್ನಘ್ನಾಯ ದೇವಾಯ ಜ್ಯೋತಿಷಾಂ ಪತಯೇ ನಮಃ

(21 ನೆ ಪುಟದಿಂದ)

ಸಂಜೆಗೆ ಮಾಟ್ಟು ಪೊಂಗಲ್ ಆಚರಿಸುತ್ತಾರೆ. ಹಸ ಕರುಗಳನ್ನು ತಮಿಳಿನಲ್ಲಿ ಮಾಡು ಎನ್ನುತ್ತಾರೆ. ಮಾಟ್ಟು ಪೊಂಗಲಿನ ಅರ್ಥ ದನ, ಕರು, ಎತ್ತುಗಳ ಹಬ್ಬ. ರೈತರ ಏಳಿಗೆಗೆ ದನ, ಕರುಗಳ, ಸೇವೆ ಮಹತ್ತರವಾದದ್ದು. ತನಗೆ ಉಪಕಾರ ಮಾಡಿದ ಹಸ, ಕರು, ಎತ್ತುಗಳನ್ನು ಪೂಜ್ಯ ಭಾವನೆಯಿಂದ ಪೂಜಿಸಿ ಕೃತಾರ್ಥರಾಗುತ್ತಾರೆ. ಗೋಶಾಲೆ, ಹಟ್ಟಿಗಳನ್ನು ಶುಚಿಗೊಳಿಸಿ, ರಂಗೋಲಿ ಬಿಡಿಸುತ್ತಾರೆ. ದನಗಳಿಗೆ ಅರಿಸಿನ ಕುಂಕುಮ ಹಚ್ಚುತ್ತಾರೆ. ಹೂಮಾಲೆ ಕೊರಳಿಗೆ ಹಾಕಿ ಜರಿಪಟ್ಟೆ ವಸ್ತ್ರಗಳನ್ನು ತೊಡಿಸುತ್ತಾರೆ. ಪೂಜಾಸತ್ಕಾರ ಮಾಡಿ ತಿಂಡಿತಿನಸುಗಳನ್ನು ಕೊಟ್ಟು ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಸುತ್ತಾರೆ. ಪೊಂಗಲ್ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುವ ಕರ್ನಾಟಕ, ತಮಿಳುನಾಡಿನಲ್ಲಿ ಆರ್ಥಿಕ, ಸಾಮಾಜಿಕತೆಗೆ ಮಹತ್ವ ನೀಡುತ್ತಾರೆ. ಪ್ರೀತಿ ವಿಶ್ವಾಸಗಳಿಂದ ಭಕ್ತಿಪೂರ್ವಕವಾಗಿ ಈ ಹಬ್ಬವು ಆಚರಿಸಲ್ಪಡುತ್ತದೆ. ಈ ಹಬ್ಬವನ್ನೇ ಕೃತಜ್ಞತಾ ಹಬ್ಬವೆಂದೂ ತಿಳಿಯಬಹುದು.

ತೆಲುಗು ಕವಿಗಳು "ಪೆನುಪಂಡುಗ" ಎಂದು ಈ ಹಬ್ಬವನ್ನು ಹೇಳುವರು. ಕೆಲವರು ಹೊಸವರ್ಷದ ಹಬ್ಬವೆಂದೂ ಆಚರಿಸುವರು. ಸಂಕ್ರಾಂತಿಯ ಪೂರ್ಣ ಮೂರುದಿವಸಗಳ ಪರ್ಯಂತ ಈ ಹಬ್ಬವು ನಡೆಯುತ್ತದೆ. ಮಕರ ಸಂಕ್ರಾಂತಿಯು ಎಲ್ಲರೂ ಸ್ನಾನಮಾಡಿ ಮೃಷ್ಟಾನ್ನವನ್ನು ಉಂಡು ಆನಂದಿಸುತ್ತಾರೆ. ಈ ದಿನಗಳಲ್ಲಿ ಎಳ್ಳು, ಬೆಲ್ಲ, ಪರಸ್ಪರ ಕೊಟ್ಟು ತೆಗೆದುಕೊಂಡು ಜೀವನದಲ್ಲಿಯ ಸುಖ ದುಃಖಗಳಿಗೆ ಎಲ್ಲರೂ ಸಮಾನ ಭಾಗಿಗಳು ಎನ್ನುವುದನ್ನು ಎತ್ತಿತೋರಿಸುತ್ತಾರೆ. ದಕ್ಷಿಣ ಭಾರತದಲ್ಲಿ ಈ ಹಬ್ಬವನ್ನು ವೈಭವದಿಂದ ಆಚರಿಸುತ್ತಾರೆ.

---


# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ಇತರ ತಿರುಪತಿಯ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-30, ಬೆಳಗ್ಗೆ 10-30, ಸಂಜೆ 4-30

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

1984

## ಫೆಬ್ರವರಿ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 2. | ಬುಧವಾರ | ಶ್ರೀ ಗೋವಿಂದರಾಜಸ್ವಾಮಿ ಸನ್ನಿಧಿಯಲ್ಲಿ ಅಧ್ಯಯನೋತ್ಸವ ಆರಂಭ. |
| 9. | ಗುರುವಾರ | ರಥಸಪ್ತಮಿ, ಸೂರ್ಯಜಯಂತಿ. |
| 11. | ಶನಿವಾರ | ಮಧ್ವನವಮಿ. |
| 12. | ಭಾನುವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ. |
| 16. | ಗುರುವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 20. | ಸೋಮವಾರ | ಶ್ರೀನಿವಾಸಮಂಗಾಪುರದಲ್ಲಿ ಶ್ರೀ ವೇಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ |
| 25. | ಶನಿವಾರ | " ಗರುಡೋತ್ಸವ |
| 28. | ಮಂಗಳವಾರ | " ರಥೋತ್ಸವ |
| 29. | ಬುಧವಾರ | ಮಹಾಶಿವರಾತ್ರಿ. |

ಮುಂದಿನ ಸಂಚಿಕೆಯಲ್ಲಿ .... .... ...

ಸಪ್ತಗಿರಿ - ಫೆಬ್ರವರಿ — 1984

**ರಾಮಾನುಜರ ನಂತರದ ಆಚಾರ್ಯಪೀಠಗಳು**
– ಡಾ॥ ಎನ್. ಅನಂತರಂಗಾಚಾರ್

**ಹಿರಿಯರು ಯಾರು?**
– ವಿದ್ವಾನ್ ಬ ನ ಗುಂಡೂರಾವ್

**ಸಂಸ್ಕೃತಿ**
– ಜಿ. ನ. ಕೃಷ್ಣಮೂರ್ತಿ

**ಯಮುನಾವಿಹಾರಿ ಶ್ರೀಕೃಷ್ಣ**
– ಆದ್ಯ ರಾಮಾಚಾರ್ಯ

**ಗೋಪಾಲದಾಸರು**
– ಡಾ॥ ಕೆ ಗೋಕುಲನಾಥ್

**ಜ್ಯೋತಿರ್ಲಿಂಗಗಳು**
– ಬಿ. ಬಸವರಾಜ ಶೇಟ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ.

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.


ಬಿಡುಗಡೆಯಾಗಿವೆ

1984 ರಲ್ಲಿ ಹೊಸ ಆಕರ್ಷಣೆ

1) ಶ್ರೀ ವೇಂಕಟೇಶ್ವರಸ್ವಾಮಿಯವರು

2) ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಶ್ರೀ ಪದ್ಮಾವತೀ ಅಮ್ಮನವರು

ತ್ರಿವರ್ಣ ಚಿತ್ರಗಳ ಚಿತ್ತಾಕರ್ಷಕ ಕ್ಯಾಲೆಂಡರ್

3) ದೈನಂದಿನ ತಿಥಿವಾರ ನಕ್ಷತ್ರಗಳ ತೆಲುಗು ಕ್ಯಾಲೆಂಡರ್.

ಜೊತೆಗೇ

ತ್ರಿವರ್ಣ ಚಿತ್ರಗಳ ೧೭ ಬಗೆಯ ವಿವಿಧ ಸಂದರ್ಭಗಳ ಶುಭಾಶಯ ಪತ್ರಿಕೆಗಳು.

ವಿವರಗಳಿಗೆ ಬರೆಯಿರಿ :

ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್,
ತಿ. ತಿ. ದೇ. ತಿರುಪತಿ.


ಸಪ್ತಗಿರಿಯ ಬಗ್ಗೆ
ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ


ಸಪ್ತಗಿರಿ

ಜಾಹೀರಾತು ದರಗಳು

| | |
|---|---|
| ಪೂರ್ತಿ ಪುಟ | ರೂ 500–00 |
| ಅರ್ಧಪುಟ | ರೂ 300–00 |
| ಕಾಲು ಪುಟ | ರೂ 150–00 |
| ಒಂದು ಕಾಲಂ | ರೂ 200–00 |

ಕೂಡಲೇ ಬರೆಯಿರಿ.

ಸಂಪಾದಕರು, ಸಪ್ತಗಿರಿ
ತಿರುಪತಿ.



Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501

